

# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಶೋಧನಾ ನಿಬಂಧ

## "ಮಹಿಳಾ ಕಾವ್ಯಗಳಲ್ಲಿ ಪುರುಷ ಪರಿಕಲ್ಪನೆ "
## (ಆಯ್ದ ಕವಿತೆಗಳಲ್ಲಿ)

ಸಂಶೋಧನಾ ವಿದ್ಯಾರ್ಥಿ

ನೋಂದಣಿ ಸಂಖ್ಯೆ: KVMBKS-00682






# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಶೋಧನಾ ನಿಬಂಧ

## "ಮಹಿಳಾ ಕಾವ್ಯಗಳಲ್ಲಿ ಪುರುಷ ಪರಿಕಲ್ಪನೆ "
(ಆಯ್ದ ಕವಿತೆಗಳಲ್ಲಿ)

ಸಂಶೋಧನಾ ವಿದ್ಯಾರ್ಥಿ
ನೋಂದಣಿ ಸಂಖ್ಯೆ: KVMBKS-00682

# ದೃಢೀಕರಣ ಪತ್ರ

: KVMBKS-00682 ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ **"ಮಹಿಳಾ ಕಾವ್ಯಗಳಲ್ಲಿ ಪುರುಷ ಪರಿಕಲ್ಪನೆ "** (ಆಯ್ದ ಕವಿತೆಗಳಲ್ಲಿ) ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

# ಪ್ರಮಾಣ ಪತ್ರ

**"ಮಹಿಳಾ ಕಾವ್ಯಗಳಲ್ಲಿ ಪುರುಷ ಪರಿಕಲ್ಪನೆ "** (ಆಯ್ದ ಕವಿತೆಗಳಲ್ಲಿ) ಎಂಬ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ವಿಷಯವಾಗಿ ಇದುವರೆಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

KVMBKS-00682
ಸಂಶೋಧನಾ ವಿದ್ಯಾರ್ಥಿ

ದಿನಾಂಕ:
ಸ್ಥಳ: ಬೆಂಗಳೂರು.

# ಪರಿವಿಡಿ

ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಅತೀ ಹೆಚ್ಚು ಪರಿಣಾಮಕಾರಿಯಾದುದು ಹಾಗೂ ಸೂಕ್ಷ್ಮ ಸಂವೇದನೆಗಳ ಅಭಿವ್ಯಕ್ತಿ ಮಾಧ್ಯಮ ಎಂದರೆ ಕಾವ್ಯ. ಹೀಗಾಗಿ ಕಾವ್ಯ ಸಾಹಿತ್ಯದ ಇತರ ಪ್ರಕಾರಗಳಿಂದ ಹೆಚ್ಚು ಆಪ್ತ ಹಾಗೂ ಜನಪ್ರಿಯವಾಗಿದೆ. ಈ ಕಾರಣಕ್ಕಾಗಿ ಮಹಿಳೆಯರು ಆಧುನಿಕ ಸಂದರ್ಭದಲ್ಲಿ ಕಾವ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಹೆಚ್ಚಾಗಿ ಬಳಸಿಕೊಂಡರು. ಮಹಿಳೆಯರ ಎಲ್ಲ ಸೂಕ್ಷ್ಮ ಒಳನೋಟಗಳು ಕಾವ್ಯಗಳಲ್ಲಿ ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಕಾವ್ಯಗಳನ್ನು ನನ್ನ ಸಂಪ್ರಬಂಧದ ಅಧ್ಯಯನ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

ಮಹಿಳಾ ಕಾವ್ಯಗಳು ಸ್ತ್ರೀ ಸಂವೇದನೆಯ ಆಗರವಾಗಿದೆ. ಸ್ತ್ರೀಯರ ವಿಶೇಷ ಅನುಭವಗಳ ದಾಖಲೆ ಈ ಕಾವ್ಯಗಳು. ಇಂತಹ ಕಾವ್ಯಗಳ ಬಗೆಗೆ ಇದುವರೆಗೂ ಸಾಕಷ್ಟು ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಲೂ ಇವೆ. ಮಹಿಳಾ ಕಾವ್ಯಗಳಲ್ಲಿ ಇದುವರೆಗೂ ಮಹಿಳೆಯರ ಸಂವೇದನೆಗಳನ್ನು ಕುರಿತು ಅಧ್ಯಯನಗಳು ಹೆಚ್ಚಾಗಿ ನಡೆದಿವೆ. ಆದರೆ ಮಹಿಳೆಯರ ಈ ಎಲ್ಲ ಅನುಭವಗಳಿಗೆ ಕಾರಣನಾದ ಪುರುಷನ ಬಗೆಗಿನ ಮಹಿಳೆಯರ ಚಿಂತನೆ, ಗ್ರಹಿಕೆಗಳ ಬಗೆಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಈ ಕಾರಣದಿಂದಾಗಿ ಮಹಿಳಾ ಕಾವ್ಯಗಳಲ್ಲಿ ಪುರುಷನ ಬಗೆಗೆ ಮಹಿಳೆಯರು ತಾಳುವ ನಿಲುವುಗಳನ್ನು ಅಧ್ಯಯನ ಮಾಡುವ ಸಲುವಾಗಿ ಈ ವಿಷಯವನ್ನು ನನ್ನ ಸಂಪ್ರಬಂಧಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ. ಇಲ್ಲಿ ಮಹಿಳಾ ಕಾವ್ಯಗಳಲ್ಲಿ ಅಡಗಿರುವ ಪುರುಷನ ಚಿತ್ರಣ, ಅವನ ಅಸ್ತಿತ್ವ, ಅವನ ಪಾತ್ರದ ಮಹತ್ವ, ಸ್ತ್ರೀ-ಪುರುಷ ಸಂಬಂಧಗಳಲ್ಲಿ ಅವನ ಪ್ರಾಮುಖ್ಯತೆ ಇತ್ಯಾದಿಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ಇಂದಿನ ಆಧುನಿಕ ಯಾಂತ್ರಿಕ ಜೀವನದಲ್ಲಿ ಸಂಬಂಧಗಳೂ ಯಾಂತ್ರಿಕಗೊಳ್ಳುತ್ತಿರುವ ಸಂದರ್ಭದಲ್ಲಿ ಈ ಸಂಬಂಧಗಳ ಪ್ರಾಮುಖ್ಯತೆಯನ್ನು ಮಹಿಳಾ ಕಾವ್ಯಗಳು ಹೇಗೆ ಕಟ್ಟಿಕೊಡುತ್ತವೆ, ಮುಖ್ಯವಾಗಿ ಸ್ತ್ರೀ-ಪುರುಷ ಸಂಬಂಧಗಳಲ್ಲಿ ಮಹಿಳೆಯರಿಗಿರುವ ಒಲವು-ನಿಲುವುಗಳೇನು ಇತ್ಯಾದಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

ನನ್ನ ಸಂಪ್ರಬಂಧದ ಸೀಮಿತ ಅವಧಿಯೊಳಗೆ ಮಹಿಳಾ ಕಾವ್ಯಗಳನ್ನು ಸಂಪೂರ್ಣವಾಗಿ ಅಧ್ಯಯನ ಮಾಡಲು ಸಾಧ್ಯವಾಗದ ಕಾರಣ ಹಾಗೂ ಸ್ತ್ರೀವಾದಿ ಚಿಂತನೆಗಳು ಇಂದು ಹೆಚ್ಚು ಮುಖ್ಯವಾಗುತ್ತಿರುವ ಸಂದರ್ಭದಲ್ಲಿ ಸಮಕಾಲೀನ ಚಿಂತನೆಗಳು ಹೆಚ್ಚು ಮುಖ್ಯವಾದ ಕಾರಣ ಈ ಸಂಪ್ರಬಂಧದಲ್ಲಿ ಆಧುನಿಕ ಕನ್ನಡ ಮಹಿಳಾ ಕಾವ್ಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಕೆಲವು ಪ್ರಮುಖ ಆಯ್ದ ಕವಯಿತ್ರಿಯರ ಕವನಗಳನ್ನು ಮಾತ್ರ ಚರ್ಚೆಗೊಳಪಡಿಸಲಾಗಿದೆ. ಪ್ರಮುಖ ಎಂದಾಕ್ಷಣ ಇತರರು ಅಮುಖ್ಯರೆಂದಲ್ಲ. ನನ್ನ ಅಧ್ಯಯನದ ವ್ಯಾಪ್ತಿಯ ಹಾಗೂ ಕಾಲದ ಮಿತಿಯೊಳಗೆ ಈ ಆಯ್ಕೆ ಮಾಡಿಕೊಳ್ಳಲಾಗಿದೆ.

ಮಹಿಳಾ ಕಾವ್ಯಗಳು ಪುರುಷನ ಬಗೆಗೆ ತೋರುವ ನಿಲುವು, ಅದರ ಸ್ವರೂಪಗಳನ್ನು ಇಲ್ಲಿ ಚರ್ಚಿಸಲಾಗಿದೆ. ಮಹಿಳೆಯರಿಗೆ ಪುರುಷರ ಬಗೆಗೆ ತಿರಸ್ಕಾರವಿದೆಯೇ, ಒಲವಿದೆಯೇ, ಇಲ್ಲ ಸಮನ್ವಯ ಭಾವವಿದೆಯೇ ಹಾಗೂ ಇದ್ದರೆ ಈ ಎಲ್ಲ ಬಗೆಯ ವಿಭಿನ್ನ ಭಾವನೆಗಳು ಗೋಚರಿಸಲು ಕಾರಣಗಳೇನು ಇತ್ಯಾದಿಗಳನ್ನು ಅರಿಯುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಕನ್ನಡ ಸಾಹಿತ್ಯ ಪರಂಪರೆಯನ್ನು ಆರಂಭದಿಂದಲೂ ಗಮನಿಸುತ್ತಾ ಬಂದಂತೆ ಕಾಣುವ ಒಂದು ದೊಡ್ಡ ಕೊರತೆ ಎಂದರೆ ಮಹಿಳಾ ಸಾಹಿತ್ಯ ರಚನೆಯದ್ದು. ಸಾಹಿತ್ಯ ಎಂದರೆ ಪುರುಷರಿಗಷ್ಟೇ ಸೀಮಿತ ಎಂದು ತಿಳಿಯಲಾಗಿದ್ದ ನಮ್ಮ ಪುರುಷ ಪ್ರಧಾನ ವ್ಯವಸ್ಥೆಯೊಳಗೆ ಮಹಿಳೆಯರು ಸಾಹಿತ್ಯವನ್ನು ಬರೆಯುವುದಿರಲಿ, ಅದನ್ನು ಕೇಳುವುದಕ್ಕೂ ಅವರು ಅನರ್ಹರೆಂದು ತಿಳಿದ ವ್ಯವಸ್ಥೆ ಇತ್ತು. ಮಹಿಳೆಯರು ಸಂಪೂರ್ಣವಾಗಿ ತಮ್ಮ ಸ್ವಾತಂತ್ರ್ಯವನ್ನು ಕಳೆದು ಕೊಂಡಿದ್ದರು. ಅಭಿವ್ಯಕ್ತಿ ಸ್ವಾತಂತ್ರ್ಯವಂತೂ ಅವರಿಗೆ ಬಹುದೂರದ ಮಾತಾಗಿತ್ತು. ಇಂತಹ ಬಹು ಜಟಿಲ ವಾತಾವರಣದಲ್ಲಿ ಮಹಿಳೆಯರು ಸಾಹಿತ್ಯದಿಂದ ದೂರ ಉಳಿದಿದ್ದು ಸಹಜವೇ ಆಗಿದೆ.

ಕಾಲ ಎನ್ನುವುದು ನಿಂತ ನೀರಲ್ಲ, ಸದಾ ಮುನ್ನಡೆಯುವ, ಬದಲಾಗುವ ಗುಣವುಳ್ಳದ್ದು. ಹೀಗಾಗಿ ಹಲವು ವೈಚಾರಿಕ ಚಿಂತಕರ ಚಿಂತನೆಗಳಿಂದ ಮಹಿಳೆಯರೂ ಸಾಹಿತ್ಯದಲ್ಲಿ ನಿಧಾನವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಮಹಿಳೆಯರು ತಮ್ಮನ್ನು ಸ್ಪಷ್ಟವಾಗಿ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡದ್ದು ೧೨ ನೇ ಶತಮಾನದಲ್ಲಿ. ನಂತರ ಮಹಿಳೆಯರ ಸಾಹಿತ್ಯ ರಚನೆ ಏರುತ್ತಾ ಇಳಿಯುತ್ತಾ ಸಾಗಿ, ಇಂದು ಬಹು ವಿಸ್ತಾರವಾಗಿ ಬೆಳೆದು ನಿಂತಿದೆ. ಈ ಸಂಪ್ರಬಂಧದ ವಿಷಯಕ್ಕನುಗುಣವಾಗಿ ಈ ಅಧ್ಯಾಯದಲ್ಲಿ ಮಹಿಳಾ ಕಾವ್ಯದ ಆರಂಭ ಮತ್ತು ಬೆಳವಣಿಗೆಯನ್ನು ಮಾತ್ರ ಗುರುತಿಸಲಾಗಿದೆ. ಅಧ್ಯಯನದ ಅನುಕೂಲತೆಗಾಗಿ ಮಹಿಳಾ ಕಾವ್ಯಗಳನ್ನು ಕಾಲದ ಆಧಾರದ ಮೇಲೆ ವಿಭಾಗಿಸಿಕೊಳ್ಳಲಾಗಿದೆ. ಕಾಲದ ಆಧಾರದ ಮೇಲೆ ವಿಭಾಗಿಸುವುದರಿಂದ ಆಯಾ ಕಾಲದಲ್ಲಿ ಬಂದ ಕವಯಿತ್ರಿಯರ ಒಟ್ಟು ಚಿಂತನೆಗಳು ಹಾಗೂ ಆ ಕಾಲದ ಒಟ್ಟು ಆಲೋಚನೆಗಳು, ಸ್ತ್ರೀಯರ ಸ್ಥಾನಮಾನಗಳು ಇತ್ಯಾದಿಗಳನ್ನು ತಿಳಿಯಲು ಸಾಧ್ಯವಿದೆ. ಕಾಲದಿಂದ ಕಾಲಕ್ಕೆ ಬದಲಾಗುವ ಚಿಂತನೆಗಳನ್ನು ಕವಯಿತ್ರಿಯರ ಮೂಲಕ ಅರಿಯಬಹುದಾದ ಕಾರಣದಿಂದಾಗಿ ಇಲ್ಲಿ ಕಾಲದ ಹಿನ್ನಲೆಯಲ್ಲಿ ಮಹಿಳಾ ಕಾವ್ಯದ ಚರಿತ್ರೆಯನ್ನು ಅಧ್ಯಯನ ಮಾಡಲಾಗಿದೆ.

೧. ಆರಂಭದಿಂದ ೧೨ ನೇ ಶತಮಾನದವರೆಗಿನ ಮಹಿಳಾ ಕಾವ್ಯ.

೨. ೧೫ ನೇ ಶತಮಾನದಿಂದ ೧೯ ನೇ ಶತಮಾನದವರೆಗಿನ ಮಹಿಳಾ ಕಾವ್ಯ.

೩. ೧೯೦೦ ರಿಂದ ೧೯೫೦ ರ ವರೆಗಿನ ಮಹಿಳಾ ಕಾವ್ಯ.

೪. ೧೯೫೦ ರ ನಂತರದ ಮಹಿಳಾ ಕಾವ್ಯ.

ಈ ವಿಭಾಗ ಕ್ರಮದಲ್ಲಿ ಆಯಾ ಕಾಲಘಟ್ಟದಲ್ಲಿ ಬಂದ ಕವಯಿತ್ರಿಯರ ಹಾಗೂ ಅವರ ಕೃತಿಗಳನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

## ೧. ಆರಂಭದಿಂದ ೧೨ ನೇ ಶತಮಾನದವರೆಗಿನ ಮಹಿಳಾ ಕಾವ್ಯ :-

ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ಕವಯಿತ್ರಿಯಾಗಿ ಕಾಣಬರುವವಳೆಂದರೆ ಕಂತಿ. ಈಕೆಯ ಬಗೆಗಿನ ವಿಚಾರಗಳು ಇಂದಿಗೂ ವಾದಗ್ರಸ್ತವಾಗಿದೆ. ಈಕೆಯ ಯಾವ ಕೃತಿಗಳೂ ಇದುವರೆಗೂ ಲಭ್ಯವಿಲ್ಲ. ಈಕೆಯ ಬಗೆಗೆ ೧೬ ನೇ ಶತಮಾನದ ಬಾಹುಬಲಿ ಕವಿಯ 'ನಾಗಕುಮಾರ ಚರಿತೆ', 'ದೇವಚಂದ್ರನ ರಾಜಾವಳೀ ಕಥೆ' ಹಾಗೂ 'ಕಂತಿ ಹಂಪನ ಸಮಸ್ಯೆಗಳು' ಎಂಬ ಪದ್ಯ ಸಂಕಲನದಿಂದ ಮಾಹಿತಿ ದೊರೆಯುತ್ತದೆ. ಈ ಆಧಾರದ ಮೇಲೆ ಹೇಳುವುದಾದರೆ ಈಕೆ ಅತ್ಯಂತ ತೀಕ್ಷ್ಣಮತಿ, ಚತುರೆಯಾಗಿದ್ದಳು. ಈಕೆಯ ಕಾಲ ಸು. ೧೧-೧೨ ನೇ ಶತಮಾನವಾಗಿದ್ದಿರಬಹುದು.

ಕಂತಿಯ ನಂತರ ಮಹಿಳಾ ಕಾವ್ಯ ಗೋಚರಿಸುವುದು ೧೨ ನೇ ಶತಮಾನದ ವಚನ ಚಳುವಳಿಯಲ್ಲಿ. ಈ ಕಾಲಘಟ್ಟದಲ್ಲಿ ಸ್ತ್ರೀಯರು ಅಪಾರ ಸಂಖ್ಯೆಯಲ್ಲಿ ಬರವಣಿಗೆಯಲ್ಲಿ ತೊಡಗಿಕೊಂಡರು. ಇದಕ್ಕೆ ಕಾರಣ ವಚನ ಚಳುವಳಿಯಲ್ಲಿ ಸ್ತ್ರೀಯರಿಗೆ ದೊರೆತ ಪ್ರಾಧಾನ್ಯತೆ, ಮುಕ್ತ ಅಭಿವ್ಯಕ್ತಿ ಸ್ವಾತಂತ್ರ್ಯ, ಪುರುಷರೊಂದಿಗಿನ ಸಮಾನ ವೇದಿಕೆ, ಗೌರವವೇ ಆಗಿದೆ. ಸೃಜನಶೀಲ ಎಂಬುದಕ್ಕೆ ಲಿಂಗಭೇದವಿಲ್ಲ ಎಂದು ಸಾರಿದ ಶರಣರು ಅದರಂತೆ ಮಹಿಳೆಯರ ಪ್ರತಿಭೆಗೂ ಮನ್ನಣೆ ನೀಡಿ ಗೌರವಿಸಿದರು. ಜಾತಿಭೇದ, ಲಿಂಗಭೇದ ಮುಂತಾದ ಸಾಮಾಜಿಕ ಅಸಿಷ್ಟಗಳ ವಿರುದ್ಧ ಶರಣರು ಹೋರಾಡಿದರು. ಸಾಮಾಜಿಕ ಸಮಾನತೆಯಂತೆ ಮಹಿಳೆಯರಿಗೆ ಆಧ್ಯಾತ್ಮಿಕ ಕ್ಷೇತ್ರದಲ್ಲೂ ಸಮಾನತೆ ನೀಡಿದ್ದು ವಚನ ಚಳುವಳಿಯ ವಿಶೇಷತೆ. ಈ ಕಾಲದಲ್ಲಿ ಹಲವಾರು ಮಹಿಳೆಯರು ತಮ್ಮ ಪ್ರತಿಭೆಯನ್ನು ಹೊರಸೂಸಿದರು. ಅಂತಹವರಲ್ಲಿ ಪ್ರಮುಖರಾದ ವಚನಕಾರ್ತಿಯರೆಂದರೆ ಅಕ್ಕ ಮಹಾದೇವಿ, ಅಮುಗೆ ರಾಯಮ್ಮ, ಗೊಗ್ಗವ್ವೆ, ಘುಗ್ಗಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ಸತ್ಯಕ್ಕ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಮುಂತಾದವರು. ಸು. ೩೩ ರಿಂದ ೩೫ ವಚನಕಾರ್ತಿಯರನ್ನು ಈ ಕಾಲದಲ್ಲಿ ನಾವು ಗುರುತಿಸಬಹುದು. ಇವರ ವಚನಗಳು ಶಿವಭಕ್ತಿ, ಕಾಯಕ ನಿಷ್ಠೆ, ಡಾಂಭಿಕ ಭಕ್ತರ ವಿಡಂಬನೆ, ಜೀವನ ಮೌಲ್ಯಗಳ ಪ್ರತಿಪಾದನೆಗಳಿಂದ ಕೂಡಿವೆ.

**ಅಕ್ಕ ಮಹಾದೇವಿ :-** ಈಕೆ ಕನ್ನಡದ ಪ್ರಪ್ರಥಮ ಕವಯಿತ್ರಿ. ಇವಳ ಅಂಕಿತ ಚೆನ್ನಮಲ್ಲಿಕಾರ್ಜುನ. ಈಕೆ ಸು. ೧೧೬೦ ರಲ್ಲಿದ್ದ ಶರಣೆಯಾಗಿದ್ದಾಳೆ. ಇವಳ ತಂದೆ ನಿರ್ಮಲ ಶೆಟ್ಟಿ, ತಾಯಿ ಸುಮತಿ. ಈಕೆಯ ಪತಿ ಕೌಶಿಕ. ಆದರೆ ಅಕ್ಕ ಅಲೌಕಿಕ ಪತಿಯನ್ನು ಅರಸುತ್ತಾ ಜೀವನದಲ್ಲಿ ವಿರಕ್ತಿ ಹೊಂದಿ ಕೌಶಿಕನನ್ನು ತೊರೆಯುತ್ತಾಳೆ. ಈಕೆಯ ವಚನಗಳು ಆಧ್ಯಾತ್ಮಿಕ, ಅನುಭಾವಿಕ ನೆಲೆಯಿಂದ ಕೂಡಿವೆ. ಈಕೆ ವಚನಗಳನ್ನಲ್ಲದೆ 'ಯೋಗಾಂಗ ತ್ರಿವಿಧಿ' ಎಂಬ ಶತಕ ಪ್ರಕಾರಕ್ಕೆ ಸೇರಿದ ಕಾವ್ಯವನ್ನು ಹಾಗೂ ತತ್ವಪದಗಳನ್ನು ರಚಿಸಿದ್ದಾಳೆ. ಈಕೆಯ ವಚನಗಳು ಶರಣಸತಿ - ಲಿಂಗಪತಿ ಭಾವದಿಂದ ರಚನೆಯಾಗಿವೆ. 'ಹರನೇ ನೀನೆನಗ ಗಂಡನಾಗಬೇಕೆಂದು ಅನಂತ ಕಾಲ ತಪಿಸಿದ್ದೆ ನೋಡಾ' ಎನ್ನುವ ಅಕ್ಕ ಲೌಕಿಕ ಗಂಡಂದಿರನ್ನು ಕುರಿತು 'ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೇ' ಎನ್ನುತ್ತಾಳೆ. ಲೌಕಿಕ ಗಂಡಂದಿರ ಬಗೆಗೆ ಈಕೆಗೆ ತೀವ್ರ ತಿರಸ್ಕಾರವಿದೆ. 'ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬೊಂಬೆಯಂತೆ' ಎನ್ನುವಳು.

ಜೀವನದಲ್ಲಿ ಈಕೆ ಹಲವು ಸಂಕಷ್ಟಗಳನ್ನು ಧೈರ್ಯವಾಗಿ ಎದುರಿಸಿದವಳು. 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯಾ?' ಎನ್ನುವ ಇವಳು 'ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು' ಎಂಬ ಸಮಚಿತ್ತದವಳು. ಈಕೆಯ ವಚನಗಳು ವ್ಯಕ್ತಿಕತೆಯನ್ನು ಹೆಚ್ಚಾಗಿ ಹೇಳಿದರೂ ಜೊತೆಯಲ್ಲೇ ಧಾರ್ಮಿಕ, ತಾತ್ವಿಕ ವಿಚಾರಗಳನ್ನು, ಜನರ ಅಜ್ಞಾನ, ಅಂಧಾನುಕರಣೆಯ ಬಗೆಗೆ, ಪುರುಷ ನಿರ್ಮಿತ ಮೌಲ್ಯಗಳ ಬಗೆಗೆ ವೈಚಾರಿಕ ನಿಲುವನ್ನು ಪ್ರಕಟಿಸಿದ್ದಾಳೆ. ಈ ಎಲ್ಲ ದೃಷ್ಟಿಗಳಿಂದ ಈಕೆ ಅತ್ಯಂತ ಮಹತ್ವದ ಕವಯಿತ್ರಿ ಎನಿಸಿದ್ದಾಳೆ.

**ಗೊಗ್ಗವ್ವೆ :-** ಈಕೆ ಕೇರಳ ಮೂಲದವಳು. ಇವಳ ೬ ವಚನಗಳು ದೊರೆತಿವೆ. ಇವಳ ಅಂಕಿತ 'ನಾಸ್ತಿನಾಥ'. ಈಕೆ ಕೂಡ ಅಕ್ಕನಂತೆ ವಿವಾಹವನ್ನು ಧಿಕ್ಕರಿಸಿದವಳು. ತನ್ನ ದೈವ ಗೊಗ್ಗೇಶ್ವರನ ಸೇವೆಗಾಗಿ ತನ್ನಿಡೀ ಬದುಕನ್ನು ಮುಡಿಪಾಗಿಟ್ಟಳು. ಸ್ತ್ರೀ-ಪುರುಷ ಸಮಾನತೆಯನ್ನು ಎತ್ತಿ ಹಿಡಿಯುವ ಈಕೆ ಆತ್ಮಕ್ಕೆ ಯಾವುದೇ ಭೇದವಿಲ್ಲ ಎಂದು ಸಾರುತ್ತಾಳೆ. 'ಮೊಲೆ ಮುಡಿ ಬಂದಡೆ ಹೆಣ್ಣೆಂಬರು ಮೀಸೆಕಾಸೆ ಬಂದಡೆ ಗಂಡೆಂಬರು' ಎನ್ನುವ ಈಕೆ ಜ್ಞಾನಕ್ಕೆ ಯಾವ ಲಿಂಗವೂ ಇಲ್ಲ, ಅದು ಲಿಂಗಾತೀತವಾದುದು ಎನ್ನು ಮೂಲಕ ಸಮಾನತೆಯ ತತ್ವವನ್ನು, ವಚನ ಚಳುವಳಿಯ ತಾತ್ವಿಕತೆಯನ್ನು ಎತ್ತಿ ಹಿಡಿಯುತ್ತಾಳೆ.

**ಅಮುಗೆ ರಾಯಮ್ಮ :-** 'ಅಮುಗೇಶ್ವರ ಲಿಂಗ' ಎಂಬ ಅಂಕಿತದ ಮೂಲಕ ವಚನಗಳನ್ನು ರಚಿಸಿದ ಈಕೆ ಸಮಾಜದ ನಿಷ್ಠುರ ವಿಮರ್ಶಕಿ. ಈಕೆಯ ವಚನಗಳಲ್ಲಿ ವೈಯಕ್ತಿಕತೆಗಿಂತ ಸಾಮಾಜಿಕ ಕಾಳಜಿಗೆ ಮನ್ನಣೆ ಹೆಚ್ಚು, ಡಾಂಭಿಕ ಭಕ್ತರ ಕುರಿತು 'ದೇಶ ದೇಶವ ತಿರುಗಿ ಮಾತುಗಳ ಕಲಿತು ಗ್ರಾಸಕ್ಕೆ ತಿರುಗುವ ದಾಸವೇಶಿಯ ಮಕ್ಕಳ ವಿರಕ್ತರೆಂಬೆನೆ', 'ಕುಂಜರನ ವೇಷವ ತೊಟ್ಟು ಹಂದಿಯಂತೆ ತಿರುಗುವ ಅಜ್ಞಾನಿಗಳೇನೆಂಬೆನಯ್ಯ' ಎಂದು ವಿಡಂಬಿಸುತ್ತಾಳೆ. ಇವಳ ವಚನಗಳು ಕ್ರಾಂತಿಕಾರಿ ಮನೋಭಾವದಿಂದ ಕೂಡಿದೆ. ಗಾದೆಮಾತುಗಳ ಬಳಕೆಯನ್ನು ಇವಳಲ್ಲಿ ಕಾಣಬಹುದು. ಇವಳ ೧೧೫ ವಚನಗಳು ಲಭ್ಯವಿದೆ. ಒಟ್ಟಾರೆ "ಅನುಭವ ಪ್ರಾಮಾಣಿಕತೆ, ಅಭಿವ್ಯಕ್ತಿಯ ಗಟ್ಟಿತನ, ಸಾಮಾಜಿಕ ಕಾಳಜಿಯ ಗುಣಗಳಿಂದ ರಾಯಮ್ಮ ಆಪ್ತಳಾಗುತ್ತಾಳೆ" (ಶಾಂತಾ ಇಮ್ರಾಪುರ).[೧]

**ಮುಕ್ತಾಯಕ್ಕ :-** ಶಿವ ಶರಣೆಯರಲ್ಲಿ ಮತ್ತೊಬ್ಬ ಪ್ರಮುಖ ಕವಯಿತ್ರಿ, ಈಕೆ. ಇವಳು ತನ್ನ ಪ್ರಖರ ವೈಚಾರಿಕತೆ, ಆತ್ಮಜ್ಞಾನ, ಆಧ್ಯಾತ್ಮಿಕ ಅರಿವು, ತಾತ್ವಿಕ ವಿಚಾರಗಳಿಂದ ಗಮನ ಸೆಳೆಯುವ ದಿಟ್ಟ ವ್ಯಕ್ತಿತ್ವದ ಸ್ತ್ರೀ. ಇವಳು ಗದುಗಿನ ಲಕ್ಕುಂಡಿಯವಳು. ಇವಳ ಸು. ೩೭ ವಚನಗಳು ದೊರೆತಿವೆ. ಇವಳ ವಚನಗಳ ಅಂಕಿತ 'ಅಜಗಣ್ಣ', 'ಅಜಗಣ್ಣ ತಂದೆ'. ಗುಪ್ತ ಭಕ್ತನಾದ ಅಜಗಣ್ಣನ ಸಹೋದರಿ ಈಕೆ. ಅಜಗಣ್ಣನ ಅಕಾಲ ಮರಣದಿಂದ ಕಂಗೆಟ್ಟ ಈಕೆಯನ್ನು ಅಲ್ಲಮ ಪ್ರಭು ಸಂತೈಸಿ, ಅವಳ ಸಂದೇಹಗಳನ್ನು ಪರಿಹರಿಸುತ್ತಾನೆ. ಈ ಸಂದರ್ಭದಲ್ಲಿ ನಡೆದ ವಾದ ವಿವಾದಗಳು ನಾಲ್ಕೂ ಶೂನ್ಯ ಸಂಪಾದನೆಗಳಲ್ಲಿ ಕಂಡು ಬರುತ್ತದೆ. ಅಜಗಣ್ಣನ ಬಗೆಗೆ ಅಪಾರ ಪ್ರೀತಿಯನ್ನು ಹೊಂದಿದ್ದ ಈಕೆ ಅವನನ್ನೇ ತನ್ನ ಆಧ್ಯಾತ್ಮಿಕ ಗುರುವನ್ನಾಗಿ ಮಾಡಿಕೊಂಡು, ಅವನಲ್ಲೇ ಶಿವನನ್ನು ಕಾಣುತ್ತಿದ್ದಳು. "ಕತ್ತಲೆ ಬೆಳಗ ಗೆಲಿಂಬ ಸಂದೇಹಿ ನಾನೊಬ್ಬಳು ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತು, ಅಜಗಣ್ಣ ನಿನ್ನ ಯೋಗ", 'ಗುರು ತಾನಾದಡೂ ಗುರುಹಿರಿಯರಬೇಕು ಎನ್ನ ಅಜಗಣ್ಣನಂತೆ'. ಹೀಗೆ ಅಜಗಣ್ಣನ ಬಗೆಗೆ ಹಲವು ವಚನಗಳಲ್ಲಿ ತನ್ನ ಪ್ರೀತ್ಯಾದರ, ಗೌರವ, ಗುರು ಭಾವನೆಯನ್ನು ತಾಳಿದ್ದಾಳೆ.

---

೧) ಸಂ. ಡಾ. ಎಚ್ ಎಸ್ ಶ್ರೀಮತಿ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ -೧೩೮

ಪ್ರಭುದೇವರು ಇವಳನ್ನು ಹಲವಾರು ಪ್ರಶ್ನೆಗಳನ್ನು ಕೇಳುವ ಮೂಲಕ ಇವಳ ಸಂದೇಹವನ್ನು ಪರಿಹರಿಸುವ ಸಂದರ್ಭದಲ್ಲಿ ಇವಳ ಜ್ಞಾನದ ಪ್ರಖರತೆ ಗೋಚರಿಸುತ್ತದೆ. ಒಟ್ಟಿನಲ್ಲಿ ಸರಳ ಪದಗಳಲ್ಲೇ ಗಂಭೀರ ವಿಷಯವನ್ನು ಪರಿಣಾಮಕಾರಿಯಾಗಿ ಹೇಳುವ ಶಬ್ದಗಳು, ಆಳವಾದ ಜ್ಞಾನ, ಆಧ್ಯಾತ್ಮಿಕ ಒಲವು ಇವೆಲ್ಲವುಗಳ ಮೂಲಕ ಈಕೆ ಪ್ರಮುಖವಾಗುತ್ತಾಳೆ.

**ಆಯ್ದಕ್ಕಿ ಲಕ್ಕಮ್ಮ :-** ಕಾಯಕ ತತ್ವವನ್ನು ಪ್ರತಿಪಾದಿಸಿದ ಪ್ರಮುಖ ವಚನಕಾರ್ತಿ ಈಕೆ. ಈಕೆಯ ಸು. ೨೫ ವಚನಗಳು ದೊರೆತಿವೆ. ಇವಳು ರಾಯಚೂರು ಜಿಲ್ಲೆಯ ಅಮಲೇಶ್ವರ ಗ್ರಾಮದವಳು. ಇವಳ ಪತಿ ಆಯ್ದಕ್ಕಿ ಮಾರಯ್ಯ. ಇವಳ ವಚನಗಳ ಅಂಕಿತ 'ಮಾರಯ್ಯಪ್ರಿಯ ಅಮರೇಶ್ವರ ಲಿಂಗ'. ತನ್ನ ಪತಿಯು ಕಾಯಕ ಮರೆತಿದ್ದಾಗ ಅವನನ್ನು 'ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ' ಎಂದು ಎಚ್ಚರಿಸಿ ಕಾಯಕ ಪ್ರಜ್ಞೆ ಮೆರೆದಿದ್ದಾಳೆ. ಒಮ್ಮೆ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ಪತಿ ಮನೆಗೆ ತಂದಾಗ 'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೇ? ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ' ಎನ್ನುವ ಈಕೆ ಅದನ್ನು ಮತ್ತೆ ಸುರಿದು ಬರುವಂತೆ ಹೇಳುತ್ತಾಳೆ. 'ಕೂಟಕ್ಕೆ ಸತಿ ಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?' ಎನ್ನುವ ಈಕೆ ಸ್ತ್ರೀ-ಪುರುಷ ಸಮಾನತೆಯನ್ನು, ಅರಿವಿಗೆ ಯಾವ ಹಂಗೂ ಇಲ್ಲ ಎಂದು ಪ್ರತಿಪಾದಿಸಿದ್ದಾಳೆ. ಸರಳ ಭಾಷೆಯಿಂದ ಕೂಡಿರುವ ಇವಳ ವಚನಗಳು ಅತ್ಯಂತ ಮೌಲ್ಯಯುಕ್ತವಾಗಿವೆ.

**ಸತ್ಯಕ್ಕ :-** ಇವಳು ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪ ಸಮೀಪದ ಹಿರೇಜಂಬೂರಿನವಳು. ಇವಳ ವಚನಗಳ ಅಂಕಿತ 'ಶಂಭುಜಕ್ಕೇಶ್ವರಾ'. ಇದುವರೆಗೂ ದೊರೆತಿರುವ ಈಕೆಯ ವಚನಗಳ ಸಂಖ್ಯೆ ೨೮. ಇವಳದು ಶಿವಭಕ್ತರ ಮನೆ ಗುಡಿಸುವ ಉತ್ಕಟ ಶಿವಭಕ್ತಿ. ಏಕದೇವತಾ ನಿಷ್ಠೆಯನ್ನು ಹೊಂದಿದವಳು ಈಕೆ. ಸಮಾಜದ ಡಂಭಾಚಾರಗಳನ್ನು ಖಂಡಿಸಿದ್ದಾಳೆ. 'ಇನಿಯಂಗೆ ತವಕವಿಲ್ಲ ಎನಗೆ ಸೈರಣೆಯಿಲ್ಲ. ಮನವಚ್ಚಿಯನರುಪ ಸಖಿಯರಿಲ್ಲ ಇನ್ನೇವೆನವ್ವಾ?' ಎಂದು ಸತಿಪತಿ ಭಾವದಿಂದ ಶಿವನಿಗಾಗಿ ಹಂಬಲಿಸುತ್ತಾಳೆ. 'ಮೊಲೆ ಮುಡಿ ಇದ್ದುದ ಹೆಣ್ಣೆಂದು ಪ್ರಮಾಣಿಸಲಿಲ್ಲ' ಎಂದು ಹೇಳುತ್ತಾ ಸ್ತ್ರೀ-ಪುರುಷ ಸಮಾನತೆಯನ್ನು ಎತ್ತಿ ಹಿಡಿಯುತ್ತಾಳೆ. ಸಾಮಾನ್ಯವಾದ ಕಸ ಗುಡಿಸುವ ಕಾಯಕ ಮಾಡುವ ಈಕೆಯಲ್ಲಿನ ಅದ್ಭುತ ಪ್ರತಿಭೆಗೆ ಈಕೆಯ ವಚನಗಳೇ ಸಾಕ್ಷಿ.

**ಉರಿಲಿಂಗ ಪೆದ್ದಿಗಳ ಪುಣ್ಯ ಸ್ತ್ರೀ ಕಾಳವ್ವೆ :-** ಇವಳ ವಚನಗಳ ಅಂಕಿತ 'ಉರಿಲಿಂಗ ಪೆದ್ದಿಗಳರಸ'. ಈಕೆ ಏಕೈಕ ದಲಿತ ವಚನಕಾರ್ತಿ. ಇವಳ ೧೨ ವಚನಗಳು ಲಭ್ಯವಿದೆ. ಇವಳ ವಚನಗಳು ದಲಿತ ಸಂವೇದನೆಯಿಂದ ಕೂಡಿವೆ. ಈಕೆಯೂ ಕಾಯಕ ತತ್ವಕ್ಕೆ ಮನ್ನಣೆ ನೀಡಿದವಳು. "ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ ಸತ್ಯಶುದ್ಧವಿಲ್ಲದುದು ಕಾಯಕವಲ್ಲ, ಆಸೆಯೆಂಬುದು ಭವದ ಭೀಜ" ಎನ್ನುವ ಈಕೆ ಕಾಯಕ ಸತ್ಯಶುದ್ಧವಾಗಿರಬೇಕು ಅದರಲ್ಲಿ ಮೇಲು ಕೀಳುಗಳಿಲ್ಲ ಎನ್ನುತ್ತಾಳೆ. ಕುಲದ ಬಗ್ಗೆ ಹೇಳುತ್ತಾ 'ಕುರಿಕೋಳಿ ಕಿರಿಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು, ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು, ಅವರೆಂತು ಕೀಳುಜಾತಿಯಾದಾರು? ಜಾತಿಗಳು ನೀವೇಕೆ ಕೀಳಾದಿರೋ" ಎನ್ನುವ ಕಾಳವ್ವನ ವಿವೇಚನೆ ಅಪೂರ್ವವಾದುದು. ಜಾತಿ ಪದ್ಧತಿಯಿಂದ ನೊಂದಿರುವ ಈಕೆ ಅದರ ಬಗೆಗೆ ತೀವ್ರ ವಿರೋಧ ವ್ಯಕ್ತ ಪಡಿಸಿದ್ದಾಳೆ. ಸಾಮಾನ್ಯ ದಲಿತ ಮಹಿಳೆಯಾದ ಕಾಳವ್ವ ಸಮಾಜದ ಅವ್ಯವಸ್ಥೆಯ ಬಗೆಗೆ ಎತ್ತಿದ ದಿಟ್ಟ ದನಿಯಿಂದಾಗಿ ಹಾಗೂ ಅವಳ ವೈಚಾರಿಕ ಚಿಂತನೆಗಳಿಂದಾಗಿ ಮುಖ್ಯಳೆನಿಸುತ್ತಾಳೆ.

ಹೀಗೆ ವಚನ ಚಳುವಳಿಯಲ್ಲಿ ಅನೇಕ ಮಹಿಳೆಯರು ತಮ್ಮನ್ನು ತಾವು ತೊಡಗಿಸಿಕೊಂಡು ಪುರುಷರಷ್ಟೇ ಸಮಾನವಾಗಿ ಅರಿವು, ಆತ್ಮಜ್ಞಾನ, ವೈಚಾರಿಕತೆಯಿಂದ ವಚನಗಳನ್ನು ರಚಿಸಿದ್ದಾರೆ. ಇವರಷ್ಟೇ ಅಲ್ಲದೆ ಬೊಂತಾದೇವಿ, ಅಕ್ಕಮ್ಮ, ನಾಗಲಾಂಬಿಕೆ, ಮೋಳಿಗೆ ಮಹಾದೇವಿ, ಸೂಳೆ ಸಂಕವ್ವೆ ಮುಂತಾದವರು ವಚನ ಚಳುವಳಿಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದ್ದಾರೆ. ೧೨ ನೇ ಶತಮಾನದಲ್ಲಿ ಮೂಡಿಬಂದ ಹಲವಾರು ಮಹಿಳೆಯರು ಸಾಹಿತ್ಯ ರಚನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ತಮ್ಮ ಸ್ವಾನುಭವಗಳನ್ನೇ ಕಾವ್ಯವಾಗಿಸಿ ಜೀವನಪ್ರೀತಿ ಮೆರೆದರು. ಶಿವನನ್ನೇ ತಮ್ಮ ಪತಿಯೆಂದು ಭಾವಿಸಿ ಅವನಿಗಾಗಿ ತಮ್ಮ ಜೀವನವನ್ನೇ ಸಮರ್ಪಿಸುವ ಮೂಲಕ ಹೊಸದಾದ ಶರಣಸತಿ-ಲಿಂಗಪತಿ ಭಾವಕ್ಕೆ ನಾಂದಿಹಾಡಿದರು. ಸರಳ ಭಾಷೆಯಲ್ಲಿ ಗಹನ ವಿಚಾರಗಳನ್ನು ಹೇಳುವ ಪ್ರೌಢಿಮೆ ಮೆರೆದರು. ಸಮಾಜದ ಅನ್ಯಾಯಗಳನ್ನು ಧೈರ್ಯವಾಗಿ ಖಂಡಿಸುವ ಮನೋಸಾಮರ್ಥ್ಯವನ್ನು ಆ ಕಾಲಕ್ಕೆ ಪ್ರದರ್ಶಿಸಿದುದು ಇವರ ವೈಶಿಷ್ಟ್ಯ. ಇವರ ತಾತ್ವಿಕ ಸಂದೇಶಗಳು ಇಂದಿಗೂ ಪ್ರಸ್ತುತವೆನಿಸುವ ಮೂಲಕ ಅತ್ಯಂತ ಮೌಲ್ಯಯುತವಾಗಿವೆ. ಒಟ್ಟಾರೆ ೧೨ ನೇ ಶತಮಾನ ಕನ್ನಡ ಸಾಹಿತ್ಯ ಚರಿತ್ರೆ ಕಂಡ ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ.

## ೨. ೧೫ ನೇ ಶತಮಾನದಿಂದ ೧೯ ನೇ ಶತಮಾನದವರೆಗಿನ ಮಹಿಳಾ ಕಾವ್ಯ.:-

ವಚನ ಚಳುವಳಿಯ ನಂತರ ೧೫ ನೇ ಶತಮಾನದವರೆಗೂ ಮಹಿಳಾ ಸಾಹಿತ್ಯ ರಚನೆಯಾದುದರ ಬಗ್ಗೆ ಯಾವುದೇ ದಾಖಲೆಗಳು ಕಂಡು ಬರುವುದಿಲ್ಲ. ಇದಕ್ಕೆ ಆ ಕಾಲದಲ್ಲಿ ನಡೆದ ಅನೇಕ ರಾಜಕೀಯ ಆಕ್ರಮಣಗಳು ಕಾರಣವಾಗಿದೆ. ಹೆಣ್ಣಿನ ರಕ್ಷಣೆಯೇ ಅಂದು ಪ್ರಮುಖವಾದ ಕಾರಣ ಸ್ತ್ರೀಯರ ಸ್ವಾತಂತ್ರ್ಯ ಹರಣವಾಯಿತು. ಸ್ತ್ರೀ ಕೇವಲ ಭೋಗದ ವಸ್ತುವಾಗಿ ಮಾರ್ಪಟ್ಟಳು. ವಿದೇಶಿಯರ ದಾಳಿಯಿಂದ ಸ್ತ್ರೀ ಸಮುದಾಯವನ್ನು ರಕ್ಷಿಸುವ ಕಾರಣದಿಂದಾಗಿ ಸ್ತ್ರೀಯರು ಬಂಧನಕ್ಕೆ ಒಳಗಾದರು. ಸ್ತ್ರೀಯರು ಪುನಃ ಸಾಹಿತ್ಯದಲ್ಲಿ ತೊಡಗಿಸಿಕೊಳ್ಳಲು ಶತಮಾನಗಳೇ ಬೇಕಾಯಿತು. ಮೈಸೂರು ಅರಸರ ಕಾಲದಲ್ಲಿ ಸ್ತ್ರೀ ಶಿಕ್ಷಣಕ್ಕೆ ಪ್ರೋತ್ಸಾಹ ದೊರೆತ ಕಾರಣ ಸಂಚಿ ಹೊನ್ನಮ್ಮ, ಶೃಂಗಾರಮ್ಮ, ಚೆಲುವಾಂಬೆ ಮೊದಲಾದ ಕವಯಿತ್ರಿಯರು ಕಂಡು ಬಂದರು. ಆಗ ಪ್ರಸಿದ್ಧವಾಗಿದ್ದ ಕೀರ್ತನಾ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಭಕ್ತಿಸಾಹಿತ್ಯವನ್ನು ರಚಿಸಿದರು. ಇವರ ಸಾಹಿತ್ಯದಲ್ಲಿ ಸಾಂಸ್ಕೃತಿಕ ಅಂಶಗಳು ಹೇರಳವಾಗಿ ದೊರೆಯುತ್ತವೆ.

**ಸಂಚಿ ಹೊನ್ನಮ್ಮ :-** ಇವಳ ಪ್ರಸಿದ್ಧ ಕೃತಿ ಹದಿಬದೆಯ ಧರ್ಮ ಎಂಬ ನೀತಿ ಕಾವ್ಯ. ಇದೊಂದು ಸಾಂಗತ್ಯ ಕೃತಿ. ಇವಳು ಚಿಕ್ಕದೇವರಾಜನ ಆಸ್ಥಾನದಲ್ಲಿದ್ದವಳು. ಇವಳ ಈ ಕೃತಿಯು ಪತಿವ್ರತಾ ಧರ್ಮವನ್ನು ಕುರಿತುದಾಗಿದೆ. ಇದರ ಮೂಲಕ ಆಗಿನ ಸಮಾಜದಲ್ಲಿ ಸ್ತ್ರೀಯರ ಸ್ಥಿತಿಗತಿಯ ಬಗೆಗೆ ತಿಳಿಯಲು ಸಾಧ್ಯವಾಗುತ್ತದೆ.

ಪತಿಯೇ ಪರಮಗುರು ಪತಿಯೇ ದೇವತೆ

ಪತಿಯೇ ಸದ್ಗತಿಯೆಂದು

ಪತಿಯ ಪಾದಾಂಬುಜದೊಳು ಭಕ್ತಿಗೈವುದು

ಸತಿಯರ ಧರ್ಮದ ಸಾರ [1]

ಪತಿ, ಅತ್ತೆ, ಮಾವರ ಸೇವೆ ಮಾಡುವುದೇ ಹೆಣ್ಣಿನ ಬಾಳಿನ ಬಹುದೊಡ್ಡ ಧ್ಯೇಯ ಎಂದು ಈಕೆ ಭಾವಿಸಿದ್ದಾಳೆ. ಬಹುಪತ್ನಿತ್ವ ಇದ್ದಾಗಲೂ ಹೆಣ್ಣು ತನ್ನ ಸವತಿಯರೊಡನೆ ಸಹಬಾಳ್ವೆ ನಡೆಸಬೇಕು ಎನ್ನುವ ಮೂಲಕ ಪುರುಷ

---

೧) ಸಂ. ಎಚ್ ಎಸ್ ಶ್ರೀಮತಿ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ - ೧೭೬

ಪ್ರಧಾನ ವ್ಯವಸ್ಥೆಗೆ ಅಧೀನಳಾಗಿ ತನ್ನನ್ನು ಒಪ್ಪಿಸಿಕೊಂಡಿದ್ದಾಳೆ. ಸಮಾಧಾನದ ಸಂಗತಿ ಎಂದರೆ ಈಕೆಗೂ ಈ ವ್ಯವಸ್ಥೆಯ ಬಗೆಗೆ ಬೇಸರವಿದ್ದು ಅದನ್ನು ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾಳೆ. ಆದರೆ ಇವಳದು ವಚನಕಾರ್ತಿಯರಂತೆ ಆಕ್ರೋಶದ ದನಿಯಲ್ಲ.

ಪೆಣ್ಣಲ್ಲವೆ ನಮ್ಮನ್ನೆಲ್ಲ ಪಡೆದ ತಾಯಿ

ಪೆಣ್ಣಲ್ಲವೆ ಪೊರೆದವಳು

ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು

ಕಣ್ಣು ಕಾಣದ ಗಾಪಿಲರು?[1]

ಎನ್ನುವ ವಿರೋಧ ಇವಳಲ್ಲಿ ಕಂಡು ಬರುತ್ತಾದರೂ 'ಒಡೆಯನಿಟ್ಟಂತೆ ಇರ್ಪುದು ಒಡವೆಗುಚಿತಂ' ಎನ್ನುವ ಮಾತುಗಳಿಂದ ಈಕೆ ಸಾಂಪ್ರದಾಯಿಕ ಮೌಲ್ಯಗಳಿಗೆ ಅಂಟಿಕೊಂಡಿದ್ದಾಳೆನ್ನುವುದು ಸ್ಪಷ್ಟ. ಒಟ್ಟು ಅಂದಿನ ಸಮಾಜದ ಸ್ಥಿತಿಗತಿಯನ್ನು ಈ ಕೃತಿ ಚಿತ್ರಿಸುತ್ತದೆ.

**ಶೃಂಗಾರಮ್ಮ :-** ಈಕೆಯ ಕಾಲ ಕ್ರಿ. ಶ. ೧೬೮೫. ಈಕೆಯೂ ಕೂಡ ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಕವಯಿತ್ರಿ. ಇವಳ ಕೃತಿ 'ಪದ್ಮಿನಿ ಕಲ್ಯಾಣ'. ಪದ್ಮಿನಿ ಮತ್ತು ವೆಂಕಟೇಶ್ವರನ ಮದುವೆಯೇ ಇದರ ಕಥಾವಸ್ತು. ಈ ಕಾವ್ಯದ ವಸ್ತು ಹಳೆಯದಾದರೂ ಮಹಿಳೆಯು ಮೊದಲ ಬಾರಿಗೆ ಇದನ್ನು ತನ್ನ ಕಾವ್ಯ ವಸ್ತುವಾಗಿಸಿಕೊಂಡಿರುವುದು ಇದರ ವಿಶೇಷತೆ. ರಾಮಾಯಣದೊಂದಿಗೆ ಹೋಲುವಂತೆ ಈ ಕಾವ್ಯವು ರಚಿತವಾಗಿದೆ.

**ರಾಣಿ ಚೆಲುವಾಂಬೆ :-** ಈಕೆಯ ದೊಡ್ಡಕೃಷ್ಣರಾಜ ಒಡೆಯರ ಪತ್ನಿ. ಕಾಲ ೧೮ ನೇ ಶತಮಾನ. ಈಕೆಯು ರಚಿಸಿದ ಕೃತಿಗಳೆಂದರೆ ವರನಂದೀ ಕಲ್ಯಾಣ, ವೆಂಕಟಾಚಲ ಮಹಾತ್ಮ್ಯ, ಮಂಗಳಾರತಿ ಪದ. ಈಕೆಯು ವೈಷ್ಣವ ಧರ್ಮದಲ್ಲಿ ಅಪಾರ ನಂಬಿಕೆಯನ್ನಿಟ್ಟವಳು. ಆದ ಕಾರಣ ಇವಳ ಕೃತಿಗಳು ವೈಷ್ಣವ ಧರ್ಮದ ಸಾರವನ್ನೇ ಎತ್ತಿ ಹಿಡಿದಿವೆ. 'ವೆಂಕಟಾಚಲ ಮಹಾತ್ಮ್ಯ' 'ವೆಂಕಟೇಶನ ಮಹಿಮೆಯನ್ನು ಕೊಂಡಾಡುವುದೇ ಆಗಿದೆ. ಈಕೆಯ ಕೃತಿಗಳ ಮೂಲಕ ಸ್ತ್ರೀಯರ ಸಾಮಾಜಿಕ ಸ್ಥಾನಮಾನದ

---

೧) ಸಂ ಆರ್ಯಾಂಬ ಪಟ್ಟಾಭಿ : ಮಹಿಳಾ ಸಾಹಿತ್ಯ ಸಮೀಕ್ಷೆ - ೧೦೯

ಅಂದಿನ ಚಿತ್ರಣ ಗೋಚರಿಸುತ್ತದೆ. ಬಹುಪತ್ನಿತ್ವವನ್ನು ಸುಲಭವಾಗಿ ಒಪ್ಪಿಕೊಳ್ಳುವ, ಪತಿಯೇ ಪರದೈವ ಎಂಬ ಮನಸ್ಥಿತಿ ಅಂದಿನ ಸ್ತ್ರೀಯರ ಮನಸ್ಸಿಗೆ ಹಿಡಿದ ಕನ್ನಡಿಯಾಗಿದೆ.

**ಗಲಗಲಿ ಅವ್ವ :-** ದಾಸ ಸಾಹಿತ್ಯದಲ್ಲಿ ಗುರ್ತಿಸಿಕೊಳ್ಳುವ ಗಲಗಲಿ ಅವ್ವನ ನಿಜನಾಮ ರಮಾಬಾಯಿ. ಕೊಪ್ಪಳ ತಾಲ್ಲೂಕಿನ ಭೋಗಾಪುರದವಳು. ಈಕೆ ೧೨ ವರ್ಷದವಳಿದ್ದಾಗ ೯೫ ವಯಸ್ಸಿನ ವಿದ್ವಾಂಸರಾದ ಮುದ್ಗಲಾಚಾರ್ಯರನ್ನು ವಿವಾಹವಾದಳು. ಆದರೆ ವಿವಾಹವಾದ ಎಂಟೇ ದಿನದಲ್ಲಿ ಪತಿಯನ್ನು ಕಳೆದುಕೊಂಡು ವಿಧವೆಯಾಗ ಬೇಕಾಯಿತು. ಆದರೆ ಧೈರ್ಯಗುಂದದ ಗಲಗಲಿ ಅವ್ವ ಮಲಮಕ್ಕಳಿಂದ ವಿದ್ಯೆ ಕಲಿತು ಸಾಹಿತ್ಯ ರಚನೆಯಲ್ಲಿ ತೊಡಗಿದಳು. ಈಕೆಯ ಕೃತಿಗಳು 'ಶೃಂಗಾರ ತಾರತಮ್ಯ', 'ಮುಯ್ಯದ ಹಾಡು', ಮೋರೆಗೆ ನೀರು ತಂದ ಹಾಡುಗಳು, 'ಬೀಗರ ಹಾಡುಗಳು' ಹಾಗೂ ಕೀರ್ತನೆಗಳು. ಇವಳ ಅಂಕಿತ 'ಶ್ರೀರಾಮೇಶ', 'ರಮಿಅರಸ' ಎಂದು. ಇವಳು ರಚಿಸಿದ ಸು. ೨೬೬ ಕೀರ್ತನೆಗಳು ದೊರೆತಿವೆ.

'ಶೃಂಗಾರ ತಾರತಮ್ಯ' ಕೃತಿಯಲ್ಲಿ ಜ್ಞಾನಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾಳೆ. ಜ್ಞಾನಕ್ಕಿಂತ ಹಿರಿದಾದ ಆಭರಣ ಮತ್ತೊಂದಿಲ್ಲ ಎಂಬ ಅಭಿಪ್ರಾಯವಿದೆ. ಭಕ್ತಿ, ಜ್ಞಾನಗಳ ಆಭರಣವನ್ನು ತೊಟ್ಟ ಸಜ್ಜನರಿಗೆ ಪ್ರಾಮುಖ್ಯತೆ ನೀಡಿದ್ದಾಳೆ. ಇವಳ ಸೇತುಬಂಧನದ ಹಾಡು ಹಾಗೂ ಮುಯ್ಯದ ಹಾಡುಗಳು ಬಹಳ ಪ್ರಸಿದ್ಧವಾದುದು. ಸಾಂಪ್ರದಾಯಿಕ ಪದ್ಧತಿಯಾದ ಮುಯ್ಯ ಕೊಡುವುದನ್ನು (ಉತ್ತರ ಕರ್ನಾಟಕದಲ್ಲಿರುವ ಪದ್ಧತಿ) ದೇವತೆಗಳು ಮಾಡುವಂತೆ ಕಾವ್ಯ ರಚಿಸಿ ತನ್ನ ಪ್ರತಿಭೆ ಮೆರೆದಿದ್ದಾಳೆ. 'ಮೋರೆಗೆ ನೀರು ತಂದ ಹಾಡು' ಜಾನಪದ ಪ್ರೇರಣೆಯಿಂದ ರಚಿತಗೊಂಡಿದೆ. ಒಟ್ಟಿನಲ್ಲಿ ತನ್ನ ಬದುಕಿನಲ್ಲಿ ಬಂದ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಿ ಸಾಹಿತ್ಯ ರಚನೆಯಲ್ಲೂ ಮುಂದೆ ಇದ್ದು ವಿಶಿಷ್ಟ ಕವಯಿತ್ರಿ ಎನಿಸಿದ್ದಾಳೆ.

**ಹೆಳವನಕಟ್ಟೆ ಗಿರಿಯಮ್ಮ :-** ಈಕೆಯ ಕಾಲ ಕ್ರಿ. ಶ. ಸು. ೧೭೫೦. ಹರಿದಾಸ ಪರಂಪರೆಯಲ್ಲಿ ಕಾಣಿಸಿಕೊಂಡ ಪ್ರಮುಖ ಕವಯಿತ್ರಿ ಈಕೆ. ಸಾಂಸಾರಿಕ ಜೀವನದಲ್ಲಿ ಜಿಗುಪ್ಸೆಗೊಂಡು, ಪತಿಗೆ ಬೇರೊಂದು ವಿವಾಹ ಮಾಡಿಸಿ, ತಾನು ದೈವಪೂಜೆಯಲ್ಲಿ ನಿರತಳಾದಳು. ಇವಳ ಅಂಕಿತ 'ಹೆಳವನ ಕಟ್ಟೆರಂಗ'. ಇವಳ ೪೬ ಹಾಡುಗಳು ದೊರೆತಿವೆ. ಅದರಲ್ಲಿ ೪೦ ಕೀರ್ತನೆಗಳು, ೫ ದೊಡ್ಡ ಹಾಡುಗಳು ಹಾಗೂ ೧ ಉಗಾಭೋಗ. ಉದ್ದಾಲಿಕನ ಕತೆ, ಶಂಕರಗಂಡನ ಹಾಡು, ಸೀತಾಕಲ್ಯಾಣ, ಚಂದ್ರಹಾಸಕತೆ, ಬ್ರಹ್ಮಕೊರವಂಜಿ ಇವು ೫ ದೊಡ್ಡ ಹಾಡುಗಳು.

ಪುರಾಣಗಳಲ್ಲಿನ ವಸ್ತುವೇ ಇವಳ ಕೃತಿಗಳ ವಸ್ತುವಾಗಿದ್ದರೂ ಅಲ್ಪಸ್ವಲ್ಪ ಮಾರ್ಪಾಡುಗಳನ್ನು ಮಾಡಿಕೊಳ್ಳುವುದರ ಮೂಲಕ ತನ್ನ ಸೃಜನ ಶೀಲತೆಯನ್ನು ಮೆರೆದಿದ್ದಾಳೆ. 'ಲವಕುಶರ ಕಾಳಗ' ಎಂಬ ಇವಳ ಲಘುಕಾವ್ಯದಲ್ಲಿ

ರಾಮನು ದೈವ ಮಾನವನಾಗಿರದೆ ಸಾಮಾನ್ಯ ಮನುಷ್ಯನಂತೆ ರಾಗ, ದ್ವೇಷಗಳನ್ನುಳ್ಳವನಾಗಿದ್ದಾನೆ. ಸೀತೆಯ ಶೀಲವನ್ನು ಶಂಕಿಸುವ ರಾಮ ಅವಳನ್ನು ಕಾಡಿಗಟ್ಟಿ ಕೊಲ್ಲುವಂತೆ ಆಜ್ಞಾಪಿಸುತ್ತಾನೆ. ಇಲ್ಲಿ ಪುರುಷರು ಸ್ತ್ರೀಯರ ಬಗೆಗೆ ತಾಳುವ ಧೋರಣೆ ವ್ಯಕ್ತವಾಗಿದೆ. ಹೆಣ್ಣಿನ ಶೀಲದ ಬಗೆಗೆ ಸಂಶಯ ಉಂಟಾದರೆ ಗಂಡು ತನ್ನ ವಿವೇಚನಾ ಶಕ್ತಿಯನ್ನು ಕಳೆದುಕೊಂಡು ವಿಪರೀತವಾಗಿ ವರ್ತಿಸುವುದಕ್ಕೆ ಇಲ್ಲಿನ ರಾಮು ನಿದರ್ಶನ. ಒಟ್ಟಾರೆ ಇವಳ ಕೃತಿಗಳು ದೈವತ್ವ, ಭಕ್ತಿಯ ನೆಲೆಯಲ್ಲಿ ಅರಳಿವೆ. ಅಂದಿನ ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಗಳಿಗೆ ಇವು ಕೈಗನ್ನಡಿಯಾಗಿವೆ.

**ಹರಪನಹಳ್ಳಿ ಭೀಮವ್ವ :-** ಹರಿದಾಸ ಸಾಹಿತ್ಯದಲ್ಲಿ ಗುರುತಿಸಿಕೊಂಡ ಮತ್ತೊಬ್ಬ ಕವಯಿತ್ರಿ ಈಕೆ. ಅತಿ ಹೆಚ್ಚಿನ ಹಾಡುಗಳನ್ನು (ಕೀರ್ತನೆ) ಈಕೆ ರಚಿಸಿದ್ದಾಳೆ. ಈಕೆಯ ಅಂಕಿತ "ಭೀಮೇಶ ಕೃಷ್ಣ". ಈ ಅಂಕಿತವನ್ನು ಇವಳಿಗೆ ಸ್ವತಃ ನಾರದರೇ ನೀಡಿದರೆಂಬ ಪ್ರತೀತಿ ಇದೆ. ಭೀಮವ್ವನ ಕಾವ್ಯಗಳನ್ನು ಚಿಕ್ಕ ಹಾಡುಗಳು ಹಾಗೂ ದೊಡ್ಡ ಹಾಡುಗಳು ಎಂದು ವರ್ಗೀಕರಿಸಬಹುದು. ಸು. ೧೪೦ ಚಿಕ್ಕ ಹಾಡುಗಳು, ೬ ದೊಡ್ಡ ಹಾಡುಗಳನ್ನು ಈಕೆ ರಚಿಸಿದ್ದಾಳೆ. ಈಕೆ ಒಬ್ಬ ಆಶು ಕವಯಿತ್ರಿ. ನಳ ಚರಿತ್ರ , ಪತಿದಾನ ಕೊಟ್ಟ ಹಾಡು, ಮುಯ್ಯದ ಹಾಡು, ರತಿಕಲ್ಯಾಣ ಮುಂತಾದವು ಇವಳ ದೊಡ್ಡ ಹಾಡುಗಳು. ಕೀರ್ತನೆಗಳನ್ನು ಸ್ತ್ರೀಯರು ಹಾಡಬಾರದೆಂಬ ನಿಷೇಧವಿದ್ದಕಾಲದಲ್ಲಿ ಇಷ್ಟೊಂದು ಹಾಡುಗಳನ್ನು ರಚಿಸಿರುವುದು ಈಕೆಯ ಪ್ರತಿಭೆಗೆ ಸಾಕ್ಷಿ. ಈಕೆಯ ಹಾಡುಗಳ ವೈಶಿಷ್ಟ್ಯವೆಂದರೆ ಅದರಲ್ಲಿ ಭಕ್ಷ್ಯಗಳ ವರ್ಣನೆ, ಆಭರಣಗಳ ವರ್ಣನೆ ಹಾಗೂ ವಿವಿಧ ಬಗೆಯ ಸೀರೆಗಳ ವರ್ಣನೆಯೂ ಇದೆ. ಈಕೆಯ ಹಾಡುಗಳಲ್ಲಿ ಕೆಲವೆಡೆ ಸ್ತ್ರೀ ಸಮಾನತೆಯ ಆಶಯಗಳು ವ್ಯಕ್ತವಾಗಿವೆ. ಮೌಖಿಕವಾಗಿಯೇ ಈಕೆ ಇಷ್ಟೊಂದು ಸಾಹಿತ್ಯ ರಚಿಸಿದ್ದು ಶ್ಲಾಘನೀಯ.

**ಬೆ ರಾ ಚೆಲ್ಲಮ್ಮ :-** ಇವಳ ಕಾಲ ೧೮೫೦ – ೧೯೧೦. ಈಕೆ ವಿದ್ಯಾವಂತೆ. ಮೈಸೂರಿನ ಬಾಲಿಕಾ ಪಾಠಶಾಲೆಯಲ್ಲಿ ಶಿಕ್ಷಕಿಯಾಗಿದ್ದಳು. ಈಕೆಯ ಕೃತಿಗಳು ರಾಜಕಳಾನಿಧಿ, ರುಕ್ಮಿಣಿ ಪರಿಣಯ, ಪಾರಿಜಾತಾಪಹರಣ (ನಾಟಕ), ಗೀತಿಕಾ ಲಹರಿ, ವೈರಾಗ್ಯ ಮಂಜರಿ, ದ್ವಾದಶ ಮಂಜರಿ. ಈಕೆಯ ಕಾವ್ಯದ ವಸ್ತು ಪುರಾಣವೇ ಆಗಿದೆ. ಈಕೆ ರಚಿಸಿದ ಕೃತಿಗಳಲ್ಲೆಲ್ಲಾ ವಿಶಿಷ್ಟವಾದುದು ರಾಜಕಳಾನಿಧಿ. ಇದು ೧೮೯೫ ರಲ್ಲಿ ಪ್ರಕಟಗೊಂಡಿತು. ಇದರಲ್ಲಿ ಗೃಹಿಣೀ ಧರ್ಮ, ಜನ್ಮ, ರಾಜಕೀಯ, ರಾಜ್ಯಾಂಗ, ಅಮಾತ್ಯ, ಬಾಂಧವೀಯ, ರಾಜವೃತ್ತಿ ಮುಂತಾದ ೧೬ ಪ್ರಕರಣಗಳಿವೆ. ಇದು ಲೌಕಿಕ ವಸ್ತುವನ್ನುಳ್ಳ ಕಾವ್ಯವಾಗಿದೆ. ಗೃಹಿಣೀ ಧರ್ಮದಲ್ಲಿ ಸಾಂಪ್ರದಾಯಿಕವಾಗಿಯೇ ಹೆಣ್ಣಿನ ಪಾತ್ರವನ್ನು ಚೆಲ್ಲಮ್ಮ ಒಪ್ಪಿಕೊಂಡಿದ್ದಾಳೆ. ಪತಿಗೆ ನಿಷ್ಠಳಾಗಿರಬೇಕೆಂದಿದ್ದಾಳೆ. ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮದ ವಿಚಾರಕ್ಕೆ ಈ ಕೃತಿಯೂ ತಳುಕು ಹಾಕಿಕೊಂಡಿದೆ.

ರಾಜಕೀಯ ಪ್ರಕರಣದಲ್ಲಿ ರಾಜನಿಗೆ ಹೇಗೆ ಶಿಷ್ಟವಾಗಿ ನಡೆದುಕೊಳ್ಳಬೇಕೆಂದು ಹೇಳುತ್ತಾಳೆ. ಒಟ್ಟಿನಲ್ಲಿ ವಿಶಿಷ್ಟ ವಸ್ತುವನ್ನು ತನ್ನ ಕೃತಿಯ ವಸ್ತುವಾಗಿಸಿ ಕೊಂಡಿರುವುದು ಈಕೆಯ ವಿಶೇಷತೆ.

**ಸುಂದರಾ ಬಾಯಿ :-** ೧೮೩೫ ರಲ್ಲಿ ಜನಿಸಿದ ಈಕೆ ಧಾರವಾಡ ಜಿಲ್ಲೆಯ ಹೆಬ್ಬಳ್ಳಿಯ ಜಹಗೀರು ದಾರರ ಮನೆತನದವಳು. ಬಾಲವಿಧವೆಯಾದ ಈಕೆ ಮನೆಯ ಧಾರ್ಮಿಕ ಪರಿಸರದಿಂದ ಆಕರ್ಷಿತಳಾಗಿ ಅನೇಕ ಪೌರಾಣಿಕ ವಸ್ತುವನ್ನುಳ್ಳ ಕಾವ್ಯಗಳನ್ನು ರಚಿಸಿದ್ದಾಳೆ. ಈಕೆಯ ರುಕ್ಮಿಣೀ ಪರಿಣಯ, ಕೃಷ್ಣನ ಹುಟ್ಟು, ರುಕ್ಮಾಂಗದ ಚರಿತೆ, ಸುಭದ್ರಾ ಕಲ್ಯಾಣ, ಗೌರಿಹಾಡು, ಶುಕ್ರವಾರ-ಶನಿವಾರದ ಹಾಡು, ರುಕ್ಮಿಣೀ ಮುಯ್ಯ, ಸುಭದ್ರಾ ಮುಯ್ಯ ಮುಂತಾದವು. ಎಂದಿನಂತೆ ಇವಳ ಎಲ್ಲ ಕೃತಿಗಳ ವಸ್ತುವು ಪೌರಾಣಿಕವೇ ಆಗಿದೆ. ಆದರೆ ಅದನ್ನು ನಿರ್ವಹಿಸಿದ ರೀತಿಯಲ್ಲಿ ಈಕೆ ಭಿನ್ನವಾಗಿದ್ದಾಳೆ. ರುಕ್ಮಿಣೀ ಮುಯ್ಯದಲ್ಲಿ ರುಕ್ಮಿಣಿ ಸ್ವತಂತ್ರ ವಿವೇಚನೆಯುಳ್ಳವಳಾಗಿ ಕಂಡು ಬರುತ್ತಾಳೆ. ಪತಿ ಕೃಷ್ಣನ ಅಭಿಪ್ರಾಯಕ್ಕೆ ಸಂಪೂರ್ಣ ತಲೆಬಾಗದೇ ತನ್ನದೇ ಆದ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತ ಪಡಿಸಿರುವುದು ಇಲ್ಲಿನ ವಿಶೇಷ. ಒಟ್ಟು ಇವಳ ಕಾವ್ಯಗಳೆಲ್ಲವು ಕೃಷ್ಣನ ಮಹಿಮೆಯನ್ನು ಕೊಂಡಾಡುವುದೇ ಆಗಿದೆ. ಇವಳ ಅಂಕಿತ 'ಶ್ರೀ ವೆಂಕಟೇಶ', 'ಬೆಟ್ಟದೊಡೆಯ ಶ್ರೀ ವೆಂಕಟೇಶ'.

**ಜೀವೂ ಬಾಯಿ :-** ಇವರ ಕಾಲ ೧೮೯೭ – ೧೯೮೩. ಇವರ ಆಧುನಿಕ ಕಾಲದ ಕೀರ್ತನಾಕಾರ್ತಿಯಾಗಿದ್ದಾರೆ. ಈಕೆಗೆ ಹನ್ನೊಂದು ವಯಸ್ಸಿನಲ್ಲೇ ವೈಧವ್ಯ ಬಂದೆರಗಿತು. ಆದರೂ ಜೀವೂಬಾಯಿ ಓದುವುದನ್ನು ಬಿಡಲಿಲ್ಲ. ಇದರ ಫಲವೇ ಸಾಹಿತ್ಯ ಕೃಷಿ. ಶ್ರೀ ಉರಗಾದ್ರಿ ವಿಠಲದಾಸರು ಇವರಿಗೆ 'ಶ್ರೀ ಕಮಲನಾಭ ವಿಠ್ಠಲ' ಎಂಬ ಅಂಕಿತವನ್ನು ನೀಡಿದರು. ಇವರು ೧೭೦ ಕೀರ್ತನೆಗಳನ್ನು, ೧೦ ದೀರ್ಘ ಹಾಡುಗಳನ್ನು ರಚಿಸಿದ್ದಾರೆ. ಇವರು ಆಧುನಿಕ ಪೂರ್ವ ಹಾಗೂ ಆಧುನಿಕ ಸಾಹಿತ್ಯದ ಕೊಂಡಿಯಾಗಿದ್ದಾರೆ. ಇವರ ಜನ್ಮಸ್ಥಳ ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ನಿಡಗುರಕಿ. ಹರಿಯ ದಶಾವತಾರ, ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವುದು ಇವರಿಗೆ ಅತ್ಯಂತ ಪ್ರಿಯವಾದುದು. ಶ್ರೀ ಪುರಂದರದಾಸರ ಚರಿತ್ರೆ, ಶ್ರೀ ಪಾಂಡುರಂಗ ಚರಿತ್ರೆ ಮುಂತಾದವು ಇವರ ದೀರ್ಘ ಹಾಡುಗಳಾಗಿವೆ. ಪುರಂದರ ದಾಸರ ಪಾತ್ರ ಮಾರ್ಪಟ್ಟಿದೆ. ಇವರ ಕೀರ್ತನೆಗಳಲ್ಲಿ ಹಲವಾರು ಸಾಂಸ್ಕೃತಿಕ ಅಂಶಗಳು ಅಡಕವಾಗಿವೆ.

ಹೀಗೆ ೧೫ ರಿಂದ ೧೯ ನೇ ಶತಮಾನದವರೆಗೆ ಕಾವ್ಯರಚನೆಯಲ್ಲಿ ತೊಡಗಿದ್ದ ಇವರ ಕೃತಿಗಳು ಆಯಾ ಸಾಮಾಜಿಕ ಸಂದರ್ಭದ ಕೈಗನ್ನಡಿಯಾಗಿದೆ. ಇವರಿಷ್ಟೇ ಅಲ್ಲದೆ ಸಣ್ಣಬಡತಿ ಗಣಪಕ್ಕ, ಪನ್ನಿ ಲಕ್ಷ್ಮೀಬಾಯಿ, ನಾಡಘರ ಶಾಂತಾಬಾಯಿ, ಓರಬಾಯಿ ಲಕ್ಷ್ಮೀದೇವಮ್ಮ, ಅಂಬಾಬಾಯಿ, ರಾಧಾಬಾಯಿ, ಸರಸಾಬಾಯಿ, ಕಳಸದ ಸುಂದರಮ್ಮ, ಗುಂಡಮ್ಮ ಇವರೆಲ್ಲರೂ ಈ ಕಾಲದ ಪ್ರಮುಖ ಕವಯಿತ್ರಿಯರಾಗಿದ್ದಾರೆ. ಒಟ್ಟಾರೆ ಈ ಕಾಲಘಟ್ಟದ ಮಹಿಳಾ ಸಾಹಿತ್ಯವನ್ನು

ಪರಿಶೀಲಿಸಿದಾಗ ಗಮನಿಸಬೇಕಾದ ಪ್ರಮುಖ ವಿಚಾರಗಳೆಂದರೆ, ಇಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿದ ಮಹಿಳೆಯರು ಬಹುಪಾಲು ಮೇಲ್ವರ್ಗಕ್ಕೆ ಸೇರಿದವರು. ಬಾಳಿನಲ್ಲಿ ನೊಂದವರು ಬಾಲವಿಧವೆಯರಾಗಿ ಸಂಸಾರ, ಗಂಡ, ಮಕ್ಕಳಲ್ಲದೆ ಇತರರಿಗಾಗಿ ಜೀವ ಸವೆಸಿದವರು.

ಇವರ ಕಾವ್ಯಗಳ ವಸ್ತು ಪೌರಾಣಿಕವಾಗಿರುವುದು ಸಾಮಾನ್ಯ. ಇದಕ್ಕೆ ಕಾರಣ ಅವರಿಗೆ ಧಾರ್ಮಿಕ ನೆಲೆಯಲ್ಲಿ ಮಾತ್ರ ಸಿಕ್ಕಿರಬಹುದಾದ ಸ್ವಾತಂತ್ರ್ಯ ಎನಿಸುತ್ತದೆ. ಇಲ್ಲಿನ ಕವಯಿತ್ರಿಯರೆಲ್ಲರೂ ಸಾಂಪ್ರದಾಯಿಕ ಪುರುಷ ಮೌಲ್ಯಗಳನ್ನೇ ಸಂಪೂರ್ಣವಾಗಿ ಒಪ್ಪಿಕೊಂಡು ಅದನ್ನು ಪ್ರಶ್ನಿಸದೇ ಬದುಕಿದವರಾಗಿ ಕಂಡು ಬರುತ್ತಾರೆ. ವಚನ ಚಳುವಳಿಯ ವಚನಕಾರ್ತಿಯರಲ್ಲಿದ್ದ ಪ್ರತಿರೋಧ, ಕ್ರಾಂತಿಕಾರಿ ಮನೋಭಾವ ಇವರಲ್ಲಿಲ್ಲ. ಜೀವನದಲ್ಲಿನ ಸಾಮಾನ್ಯ ವಿಷಯ ಇವರ ಕಾವ್ಯದ ವಸ್ತುವಾಗಿದೆ. ಆದರೆ ಅದರ ಅಂತಿಮ ಉದ್ದೇಶ ಆಧ್ಯಾತ್ಮಿಕತೆ. ಈ ಕವಯಿತ್ರಿಯರಲ್ಲಿ ಬಹುತೇಕ ಅನಕ್ಷರಸ್ಥರೇ ಆಗಿದ್ದಾರೆ. ಇವರ ಸಾಹಿತ್ಯದ ಬಹುಭಾಗ ಮೌಖಿಕವಾಗಿಯೇ ಉಳಿದುಕೊಂಡಿದೆ. ಹಾಗಾಗಿ ಇದರ ಸಂಪೂರ್ಣ ಅಧ್ಯಯನ ಸಾಧ್ಯವಾಗಿಲ್ಲ.

### ೩. ೧೯೦೦ ರಿಂದ ೧೯೫೦ ರ ವರೆಗಿನ ಮಹಿಳಾ ಕಾವ್ಯ :-

ಈ ಕಾಲಘಟ್ಟದಲ್ಲಿ ಹೆಚ್ಚಿನ ಸಂಖ್ಯೆಯ ಮಹಿಳೆಯರು ಸಾಹಿತ್ಯ ಕ್ಷೇತ್ರದಲ್ಲಿ ಗುರ್ತಿಸಿಕೊಂಡರು. ಇದಕ್ಕೆ ಬ್ರಿಟೀಷರ ಆಗಮನದಿಂದ ಉಂಟಾದ ಹಲವಾರು ಚಳುವಳಿಗಳು, ಶೈಕ್ಷಣಿಕ ಕ್ರಾಂತಿ, ರಾಷ್ಟ್ರೀಯ ಆಂದೋಲನಗಳು, ಕೈಗಾರಿಕಾ ಕ್ರಾಂತಿ, ಮಹಾಯುದ್ಧಗಳು ಈ ಎಲ್ಲವುಗಳ ಪರಿಣಾಮವಾಗಿ ಜನರ ಚಿಂತನೆಗಳಲ್ಲಿ ಆದ ಬದಲಾವಣೆಗಳೇ ಕಾರಣ. ಹಲವು ರಾಷ್ಟ್ರ ನಾಯಕರ ಪರಿಶ್ರಮದ ಪರಿಣಾಮವಾಗಿ ಸ್ತ್ರೀಯರಿಗೆ ಶಿಕ್ಷಣ ಲಭ್ಯವಾಯಿತು. ಮಹಿಳೆಯರ ನೋವುಗಳಿಗೆ ಸಾಹಿತಿಗಳು ಸ್ಪಂದಿಸಲನುವಾದರು. ಆದರೆ ತಮ್ಮ ನೋವು-ನಲಿವುಗಳು ಮಹಿಳೆಯರು ತಾವೇ ಹೇಳಿಕೊಳ್ಳಬೇಕಾದ ಅನಿವಾರ್ಯತೆಯು ಮಹಿಳಾ ಸಾಹಿತ್ಯ ರಚನೆಯಾಗಲು ಕಾರಣವಾಯಿತು.

ಈ ಕಾಲಘಟ್ಟದಲ್ಲಿ ಬಂದ ಮಹಿಳೆಯರು ಸ್ತ್ರೀ ಶಿಕ್ಷಣ, ನೋವು-ನಲಿವುಗಳಿಗೆ ಸಕಾರಾತ್ಮಕ ಚಿಂತನೆಗಳನ್ನು ವ್ಯಕ್ತಪಡಿಸಿದರೂ ಇವರಲ್ಲಿ ಪುರುಷ ಪ್ರಧಾನ ಮೌಲ್ಯಗಳು ಹಾಗೆ ಉಳಿದುಕೊಂಡು ಬಂದಿದೆ. ಸಾಹಿತ್ಯ ಪ್ರಕಾರಗಳ ಆಯ್ಕೆಯಲ್ಲಿ, ಇವರ ಚಿಂತನೆಗಳಲ್ಲಿ ಹಳೆಯ ಮತ್ತು ಹೊಸ ಚಿಂತನೆಗಳ ಮಿಶ್ರಣ ಗೋಚರಿಸುತ್ತದೆ. ಕಾವ್ಯ, ಕತೆ, ಕಾದಂಬರಿ, ನಾಟಕ, ಪ್ರಬಂಧ, ವ್ಯಕ್ತಿಚಿತ್ರ ಹೀಗೆ ಹಲವು ಪ್ರಕಾರಗಳಲ್ಲಿ ಇವರ ಸಾಧನೆ ಕಂಡು ಬರುತ್ತದೆ. ಈ ಸಂಪ್ರಬಂಧದ ವಿಷಯ ಮಹಿಳಾ ಕಾವ್ಯವಾದ್ದರಿಂದ ಇಲ್ಲಿ ಮಹಿಳಾ ಕಾವ್ಯಗಳನ್ನು ಮುಖ್ಯವಾಗಿಟ್ಟುಕೊಂಡು ವಿಷಯವನ್ನು ನಿರೂಪಿಸಲಾಗಿದೆ. ಈ

ಕಾಲಘಟ್ಟದಲ್ಲಿ ಮಹಿಳೆಯರು ಕಾವ್ಯಕ್ಕೆ ಹೆಚ್ಚಿನ ಮನ್ನಣೆ ನೀಡಿಲ್ಲ. ಅವರ ಆಸಕ್ತಿಯ ಕ್ಷೇತ್ರ ಕತೆ, ಕಾದಂಬರಿಯಾದ್ದರಿಂದ ಹೆಚ್ಚು ಜನ ಕವಯಿತ್ರಿಯರು ಲಭ್ಯವಿಲ್ಲ.

**ನಂಜನಗೂಡು ತಿರುಮಲಾಂಬ :-** ೨೦ ನೇ ಶತಮಾನದ ಮೊದಲರ್ಧದ ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಆದ್ಯರು ನಂಜನಗೂಡು ತಿರುಮಲಾಂಬರವರು. ಇವರ ಕಾಲ ೧೮೮೭-೧೯೮೨. ತಂದೆ ವೆಂಕಟಕೃಷ್ಣ ಅಯ್ಯಂಗಾರ್, ತಾಯಿ ಅಲಮೇಲಮ್ಮ. ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಂಡ ಈಕೆ ಬಾಲ ವಿಧವೆಯಾದರು. ತನ್ನಿಡೀ ಜೀವನವನ್ನು ಸಾಹಿತ್ಯ ರಚನೆಗೆ ಮುಡಿಪಾಗಿಟ್ಟರು. ಇವರು ಕಥೆ, ನಾಟಕ, ಕಾದಂಬರಿ, ಕಾವ್ಯ, ಪ್ರಬಂಧ, ವ್ಯಕ್ತಿಚಿತ್ರ ಹೀಗೆ ಹಲವು ಪ್ರಕಾರಗಳಲ್ಲಿ ದುಡಿದಿದ್ದಾರೆ. ಇವರು ಭಕ್ತಿ ಗೀತಾವಲಿ, ಭದ್ರ ಗೀತಾವಳಿ ಮತ್ತು ಭಾವ ಗೀತವಳಿ ಎಂಬ ಹಾಡುಗಳ ಸಂಕಲನ ಕೃತಿಗಳನ್ನು ರಚಿಸಿದ್ದಾರೆ. ಇವೆಲ್ಲ ಹಾಡುಗಳ ರೂಪದಲ್ಲಿರುವುದು ಇದರ ವಿಶೇಷ. ಭಕ್ತಿ ಗೀತಾವಲಿಯು ಶ್ರೀಕೃಷ್ಣ ಭಕ್ತಿಯನ್ನು ಸಾರುವ ಗೀತೆಗಳ ಸಂಕಲನವಾಗಿದೆ. ೧೯೧೬ ರಲ್ಲಿ ಪ್ರಕಟವಾದ 'ಭದ್ರ ಗೀತಾವಳಿ'ಯಲ್ಲಿ ಎಪ್ಪತ್ತು ಹಾಡುಗಳಿದ್ದು ಇವು ಮದುವೆಯ ಸಂದರ್ಭದಲ್ಲಿ ಹಾಡುವ ಹಾಡುಗಳಾಗಿ ಆ ಕಾಲಕ್ಕೆ ಪ್ರಸಿದ್ಧವಾಗಿತ್ತು. ತಿರುಮಲಾಂಬರವರ ನಿಧನಾನಂತರ ಪ್ರಕಟವಾದ 'ಭಾವ ಗೀತಾವಳಿ' ಶ್ರೀಹರಿಯನ್ನು ಸ್ತುತಿಸಿ ಹಾಡಿರುವ ಗೀತೆಗಳ ಸಂಕಲನವಾಗಿದೆ. ಇದರಲ್ಲಿ ಕನ್ನಡಾಂಬೆಯನ್ನು ಕುರಿತ ಗೀತೆಗಳಿರುವುದು ಇದರ ವಿಶೇಷ. ತಿರುಮಲಾಂಬರವರು "ಹಾಡುಗಳ ಮಾಧ್ಯಮದ ಮೂಲಕ ತಮ್ಮ ಕಾವ್ಯಾಭಿವ್ಯಕ್ತಿಯನ್ನು ತೋರಿ ಇಪ್ಪತ್ತನೆಯ ಶತಮಾನದ ಪ್ರಥಮ ಕವಯಿತ್ರಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದಾರೆ.[೧]

**ತಿರುಮಲೆ ರಾಜಮ್ಮ :-** ಇವರ ಕಾವ್ಯನಾಮ 'ಭಾರತಿ'. ಇವರು ೧೯೦೦, ನವೆಂಬರ್ ೨೦ ರಂದು ತುಮಕೂರಿನಲ್ಲಿ ಜನಿಸಿದರು. ಇವರ ಪತಿ ತಿರುಮಲೆ ತಾತಾಚಾರ್ಯ ಶರ್ಮ. ಇವರು ಸಂಗೀತ ವಿದುಷಿಯಾಗಿದ್ದರು. ಇವರು ಸಾಹಿತ್ಯದ ನಾಟಕ, ಕಾವ್ಯ, ವ್ಯಕ್ತಿಚಿತ್ರ, ಪ್ರಬಂಧ ಪ್ರಕಾರಗಳಲ್ಲಿ ದುಡಿದಿದ್ದಾರೆ. 'ತಪಸ್ವಿನಿ' ಎಂಬ ಕಾವ್ಯನಾಟಕವನ್ನು ೧೯೩೧ ರಲ್ಲಿ ರಚಿಸಿದ್ದಾರೆ. ಇವರ 'ರಾಷ್ಟ್ರಭಕ್ತಿ' ಎಂಬುದು ದೇಶಭಕ್ತಿ ಗೀತೆಗಳ ಸಂಕಲನವಾಗಿದೆ. ವೀರವಾಣಿ, ಅಪೂರ್ವ ಸಂಧಿ ಎಂಬ ಕವನಗಳು ದೇಶಭಕ್ತಿಯನ್ನು ಕುರಿತದ್ದಾಗಿದೆ. ತಮ್ಮ ಕಾವ್ಯಗಳಲ್ಲಿ ಪುರಾಣವನ್ನು ಹಾಗೆ ರಾಷ್ಟ್ರೀಯತೆಗೆ ಸಂಬಂಧಿಸಿದ ವಸ್ತುವನ್ನು ಬಳಸಿಕೊಂಡು ವಿಶಿಷ್ಟರೆನಿಸಿದ್ದಾರೆ.

---

೧) ಅಕ್ಕ ಮಹಾದೇವಿ : ನಂಜನಗೂಡು ತಿರುಮಲಾಂಬ - ೩೭

**ಬೆಳಗೆರೆ ಜಾನಕಮ್ಮ :-** ಇವರ ಕಾಲ ೧೯೧೨ - ೧೯೪೮. ಕಾವ್ಯನಾಮ 'ಜನಕಜೆ'. ಚಂದ್ರ ಶೇಖರ ಶಾಸ್ತ್ರಿ ಮತ್ತು ಅನ್ನಪೂರ್ಣಮ್ಮ ಇವರ ತಂದೆ ತಾಯಿ. ವಿದ್ಯಾಭ್ಯಾಸ ೨ ನೇ ತರಗತಿ. ಇವರು ನೂರಾರು ಕವನಗಳನ್ನು ರಚಿಸಿದ್ದಾರೆ. ಇವರ ಕವನ ಸಂಕಲನ 'ಕಲ್ಯಾಣ'. "ಗಂಡನೆಂದರೆ ಪ್ರಾಣ ಗಂಡ ನೆಗ್ಗೆ ನೀ ಗಂಡನ ಕೂಡಿಕೊಂಡ್ಯ ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತ"[೧]. ಎಂದು ಗಂಡನ ಕುರಿತು ವಿರುದ್ಧ ದನಿ ಎತ್ತುವ ಇವರು ಕವನದ ಅಂತ್ಯದಲ್ಲಿ ಮತ್ತದೇ ಸಂಪ್ರದಾಯಕ್ಕೆ ಮೊರೆಹೋಗುತ್ತಾರೆ. 'ನಿರ್ಮಲವಾಗಿರಲಿ ಮನಸು ಪತಿಯ ಚಿತ್ತವ ನೀನನುಸರಿಸು' ಎಂದು ಹೇಳುವ ಮೂಲಕ ಸಾಂಪ್ರದಾಯಿಕ ಮೌಲ್ಯಗಳಿಗೆ ಕಟ್ಟು ಬಿದ್ದಿದ್ದಾರೆ. ಇವರ 'ಜಯ ಜಯ ಭಾರತ ಜನನಿ' ಕವನದಲ್ಲಿ ಬ್ರಿಟೀಷರಿಂದ ಪಾರತಂತ್ರ್ಯ ಸ್ಥಿತಿಯೊಧಗಿರುವ ಬಗೆಗೆ ವಿಷಾಧವಿದೆ. ಒಟ್ಟಿನಲ್ಲಿ ದಾಂಪತ್ಯ, ದೇಶಪ್ರೇಮ, ಸಾಮಾಜಿಕ ಮೂಢ ಆಚರಣೆಗಳ ಬಗೆಗೆ ರಚಿಸಿರುವ ಇವರ ಕವನಗಳು ವಿಶಿಷ್ಟವಾಗಿವೆ.

**ತುಳಸಿಬಾಯಿ :-** ಇವರ ಕಾವ್ಯನಾಮ 'ಮಲ್ಲಿಗೆ'. ಇವರು ಹಲವು ಕವಿತೆಗಳನ್ನು ರಚಿಸಿದ್ದಾರೆ. 'ರಂಗಶೆಟ್ಟಿ', 'ಕಾಳಗೌಡ'. ಇವು ಗೋವಿನ ಹಾಡಿನ ಮಟ್ಟುಗಳನ್ನು ಹೊಂದಿದೆ. 'ರಂಗಶೆಟ್ಟಿ' ಉಪಲಬ್ಧವಿಲ್ಲ. ಪ್ರೀತಿ, ಪ್ರೇಮ, ಆಧ್ಯಾತ್ಮಿಕ ವಸ್ತುವುಳ್ಳ ಹಲವು ಕವನಗಳು ಇವರಿಂದ ರಚಿತವಾಗಿವೆ.

ಹೀಗೆ ಕೆಲವು ಕವಯಿತ್ರಿಯರು ಈ ಕಾಲಘಟ್ಟದಲ್ಲಿ ಗುರ್ತಿಸಿಕೊಂಡಿದ್ದಾರೆ. ಈ ಅವಧಿಯಲ್ಲಿ ಮಹಿಳೆಯರು ಕತೆ, ಕಾದಂಬರಿಗಳ ಕಡೆಗೆ ಹೆಚ್ಚಿನ ಒಲವನ್ನು ವ್ಯಕ್ತ ಪಡಿಸಿದ ಕಾರಣ ಕಾವ್ಯ ಪ್ರಕಾರದಲ್ಲಿ ಸಾಹಿತ್ಯ ಕೃಷಿ ಕಡಿಮೆಯಾಗಿದೆ. ತಮ್ಮ ಭಾವನೆಗಳನ್ನು ಸುಲಭವಾಗಿ ವ್ಯಕ್ತಪಡಿಸಲು ಕಾವ್ಯಕ್ಕಿಂತ ಕಾದಂಬರಿಗಳೇ ಹೆಚ್ಚು ಸೂಕ್ತ ಎಂದು ಭಾವಿಸಿದ್ದರು. ಆದರೆ ನಂತರದಲ್ಲಿ ಮಹಿಳೆಯರ ಒಲವು ಕಾವ್ಯದತ್ತ ಸರಿಯಿತು. ಕಾವ್ಯವೇ ಅವರ ಅಭಿವ್ಯಕ್ತಿಯ ಪ್ರಧಾನ ವೇದಿಕೆಯಾಯಿತು.

---

೧) ಸಂ. ಎಚ್ ಎಸ್ ಶ್ರೀಮತಿ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ -೨೭೧

## ೪. ೧೯೫೦ ರ ನಂತರದ ಮಹಿಳಾ ಕಾವ್ಯ :-

೧೯೦೦ ರ ನಂತರ ಮಹಿಳೆಯರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟು ಅಪಾರ ಸಾಧನೆಗೈದರು. ಆದರೆ ಇವರ ಸಾಹಿತ್ಯ ಕೃಷಿ ಏತೇಚ್ಛವಾಗಿ ನಡೆದಿದ್ದು ಕತೆ, ಕಾದಂಬರಿ ಕ್ಷೇತ್ರದಲ್ಲಿ. ಕಾವ್ಯದಲ್ಲಿ ಅತ್ಯಂತ ಕಡಿಮೆಯೇ ಆಗಿದೆ. ಆದರೆ ೧೮೫೦ ರ ದಶಕದ ನಂತರದಲ್ಲಿ ಮಹಿಳೆಯರು ಕಾವ್ಯ ಕ್ಷೇತ್ರದಲ್ಲಿ ಅಪಾರವಾಗಿ ತಮ್ಮನ್ನು ತಾವು ತೊಡಗಿಸಿಕೊಂಡರು. ೭೦ ರ ದಶಕದಿಂದೀಚೆಗೆ ಹಲವಾರು ಕವಯಿತ್ರಿಯರು ನೂರಾರು ಕವಿತೆಗಳನ್ನು ರಚಿಸಿದ್ದಾರೆ. ಅಂದು ಪ್ರಬಲವಾಗಿದ್ದ ನವ್ಯ ಸಾಹಿತ್ಯದ ಪ್ರಭಾವದಿಂದ ಹೊಸ ರೀತಿಯ ಚಿಂತನೆಗಳು ರೂಪಿಸಿಕೊಂಡವು. ವೈಯಕ್ತಿಕ ಅಭಿಪ್ರಾಯಗಳಿಗೆ ಮನ್ನಣೆ ದೊರೆತ ಈ ಸಂದರ್ಭದಲ್ಲಿ ಮಹಿಳೆಯರು ತಮ್ಮ ಅನಿಸಿಕೆ, ಅಭಿಪ್ರಾಯಗಳಿಗೆ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಕಂಡುಕೊಂಡಿದ್ದು ಕಾವ್ಯ ಪ್ರಕಾರವನ್ನು.

ಈ ಕಾಲಘಟ್ಟದಲ್ಲಿ ಕಂಡು ಬರುವ ಪ್ರಮುಖ ಕವಯಿತ್ರಿಯರೆಂದರೆ ಎಲ್ ಜಿ ಸುಮಿತ್ರಾ, ಸರೋಜಿನಿ ಮಹಿಷಿ, ವಸಂತ, ಶೈಲಜಾ ಉಡಚಣ, ವಿಜಯಾ ದಬ್ಬೆ, ಪ್ರೇಮಾಭಟ್, ಮಾಲತಿ ಪಟ್ಟಣಶೆಟ್ಟಿ, ಕಮಲಾ ಹಮ್ಮಿಗೆ, ಶಶಿಕಲಾ ವೀರಯ್ಯ ಸ್ವಾಮಿ, ಹೇಮಾ ಪಟ್ಟಣಶೆಟ್ಟಿ, ಮುಕ್ತಾಯಕ್ಕ ಎಚ್ ಎಸ್, ಪ್ರತಿಭಾ ನಂದಕುಮಾರ್, ಎಂ ಎಸ್ ವೇದಾ, ಸ ಉಷಾ, ಎಂ ಆರ್ ಕಮಲ, ಸವಿತಾ ನಾಗಭೂಷಣ, ಸುಕನ್ಯಾ ಮಾರುತಿ, ಬಿ ಸರ್ವಮಂಗಳಾ, ಡಿ ಬಿ ರಜಿಯಾ, ಎಚ್ ಎಲ್ ಪುಷ್ಪ, ದು ಸರಸ್ವತಿ ಮುಂತಾದವರು. ಈ ಕಾಲಘಟ್ಟದಲ್ಲಿ ಬಂದ ಮಹಿಳಾ ಕಾವ್ಯಗಳು ವಸ್ತು, ಭಾಷೆ, ವಿಚಾರ, ಅಭಿವ್ಯಕ್ತಿ ಕ್ರಮ ಹೀಗೆ ಎಲ್ಲದರಲ್ಲೂ ಭಿನ್ನವಾಗಿವೆ. ಪರಂಪರಾಗತ ,ಮೌಲ್ಯಗಳ ಬಗೆಗಿನ ಅಸಹನೆ, ಪ್ರಶ್ನಿಸುವ ಮನೋಭಾವ, ಸ್ವಾನುಭವಗಳ ಅಭಿವ್ಯಕ್ತಿ, ವೈಚಾರಿಕತೆ, ಪುರುಷ ಪ್ರಧಾನ ಮೌಲ್ಯಗಳ ಬಗೆಗಿನ ವಿರೋಧಿ ಭಾವನೆ, ಸಾಂಪ್ರದಾಯಿಕ ಸ್ತ್ರೀ ಮಾದರಿಗಳ ನಿರಾಕರಣೆ ಇತ್ಯಾದಿಗಳಿಂದ ಇದುವರೆಗಿನ ಮಹಿಳಾ ಕಾವ್ಯಕ್ಕಿಂತ ಇದು ತೀರಾ ಭಿನ್ನವಾಗಿದೆ. ಇಂತಹ ಕಾವ್ಯಗಳನ್ನು ರಚಿಸಿದ ಕವಯಿತ್ರಿಯರ ಮೂಲಕ ಈ ಕಾಲದ ಕಾವ್ಯವನ್ನು ತಿಳಿಯ ಬಹುದಾಗಿದೆ.

**ಡಾ. ಶೈಲಜಾ ಉಡುಚಣ :-** ಕನ್ನಡ ಕಾವ್ಯ ಕ್ಷೇತ್ರದ ಪ್ರಮುಖ ಹಾಗೂ ಹಿರಿಯ ಕವಯಿತ್ರಿ ಈಕೆ. ಜನನ ೧೯೩೫ ರಲ್ಲಿ. ಇವರ ತಂದೆ ಗಿರಿಮಲ್ಲಪ್ಪ, ತಾಯಿ ಪಾರ್ವತಮ್ಮ. ಇವರ ಕವನ ಸಂಕಲನಗಳು ಒಂದು ಘಳಿಗೆ (೧೯೭೨), ಕಾದು ನೋಡು (೧೯೭೮), ಸ್ವಗತ ( ೧೯೮೧), ಕಪ್ಪು ನೆಲ, ಸೊಕ್ಕಿದ ಸೂರ್ಯ (೧೯೮೮), ತುಂತುರು ಹನಿಗಳು, ನನ್ನಂಥವರು (೧೯೯೫), ಕೇಳುಮಗ. ಇವರ ಕಾವ್ಯಗಳಲ್ಲಿ ಸ್ತ್ರೀ ಪರ ನಿಲುವುಗಳನ್ನು ಕಾಣಬಹುದು. ಇವರ ಭಾಷೆ ಹರಿತವಾಗಿದ್ದು, ಸಂಘರ್ಷಮಯ ಬದುಕಿನ ಚಿತ್ರಣವನ್ನು ಇವರ ಕಾವ್ಯಗಳು ನೀಡುತ್ತವೆ. ಇವರ 'ಹೊಸ ಕಾವ್ಯ ಹುಟ್ಟುವುದಿಲ್ಲ' ಕವಿತೆಯು ಈ ದೇಶದಲ್ಲಿ ಹೊಸ ಚಿಂತನೆಗಳಿಗೆ, ಕಾರ್ಯಗಳಿಗೆ ಆಸ್ಪದವಿಲ್ಲದೆ, ಹುಟ್ಟಿದಲ್ಲೇ ಮುರುಟಿ ಹೋಗುವ ವಿಪರ್ಯಾಸವನ್ನು ಕುರಿತು ಹೇಳುತ್ತದ.

ಈ ದೇಶದಲ್ಲಿ ಹೊಸ ಕಾವ್ಯ ಹುಟ್ಟುವುದಿಲ್ಲ

ಹುಟ್ಟಿದರೂ --

ಹುಟ್ಟಿದಲ್ಲೇ ಸಾಯುವ ಒಂಟಿ ದನಿಯಾಗಿ

ರಕ್ತ ಹೀರುವ ಬಂಜರು ಭೂಮಿಯಲ್ಲಿ ನಿರ್ಜೀವವಾಗಿ

ನಿಧಾನ ನಿಧಾನ ಸಾಯುತ್ತದೆ.[೧]

ಈ ದೇಶದಲ್ಲಿ ಹೊಸಬಾಳು, ಹೊಸ ಸೃಷ್ಟಿ, ಹೊಸ ಚಿಂತನೆಗಳಿಗೆ ಅವಕಾಶವೇ ಇಲ್ಲ ಎಂಬ ವಿಷಾದ ಈ ಕವನದಲ್ಲಿದೆ.

**ವಿಜಯಾ ದಬ್ಬೆ :-** ಜನನ ೧೯೫೨. ಕನ್ನಡದ ಪ್ರಮುಖ ಕವಯಿತ್ರಿ ಹಾಗೂ ಸ್ತ್ರೀವಾದಿ ಚಿಂತಕಿ. ಇವರ ಕವನ ಸಂಕಲನಗಳು ಇರುತ್ತವೆ (೧೯೭೫), ನೀರು ಲೋಹದ ಚಿಂತೆ (೧೯೮೫), ತಿರುಗಿಸಿಂತ ಪ್ರಶ್ನೆ (೧೯೯೫). "ಹಗಲು ರಾತ್ರಿ ಕಾಲೇಜು ಫ್ಯಾಕ್ಟರಿ ರಸ್ತೆ ಎಲ್ಲೂ ಎಲ್ಲೂ ಆಕೆ ಘೋಷ ಬಿಚ್ಚಿದ್ದನ್ನು ಜನ ಕಂಡಿಲ್ಲ" ಎನ್ನುವ 'ಫರೀದಾ ಬೇಗಂ' ಕವನದ ಸಾಲುಗಳು ಮಹಿಳೆಯರ

---

೧) ಸಂ. ಡಾ. ಎಂ ಎ ಜಯಚಂದ್ರ ಮತ್ತು ಇತರರು : ಆಧುನಿಕ ಕನ್ನಡ ಕವನಗಳು - ೧೨೮

ಬದುಕಿನ ಚಿತ್ರಣ ನೀಡುತ್ತದೆ. ಹೆಣ್ಣಿಗೆ ಈ ಬಂಧನಗಳಿಂದಾಗಿ ಆಕೆ ಸಮಾಜವನ್ನು ಮುಕ್ತವಾಗಿ ನೋಡಲು ಕಷ್ಟವಾಗುವಂತಹ ಪರಿಸ್ಥಿತಿ ಪುರುಷ ಪ್ರಧಾನ ಮೌಲ್ಯಗಳ ದಿಗ್ಬಂಧನದಲ್ಲಿ ಸಿಲ್ಕುನಲುಗಿ ಹೋಗುತ್ತಿದ್ದಾಳೆ. ಆಕೆ ಇಚ್ಛಿಸಿದಂತೆ ಬದುಕಲು ಅವಳಿಗೆ ಅವಕಾಶವೇ ಇಲ್ಲದಂತಾಗಿದೆ. ಇಂತಹ ಸ್ತ್ರೀವಾದಿ ಚಿಂತನೆಗಳು ವಿಜಯಾ ಅವರ ಕಾವ್ಯದ ಪ್ರಮುಖ ಅಂಶ.

**ಶಶಿಕಲಾ ವೀರಯ್ಯಸ್ವಾಮಿ :-** ಈಕೆ ಪ್ರತಿಭಟನಾ ಮನೋಧರ್ಮದ ಕವಯಿತ್ರಿ. ಕನ್ನಡ ಉಪನ್ಯಾಸಕಿಯಾದ ಇವರ ಕವನ ಸಂಕಲನಗಳು ಗುಬ್ಬೀಮನಿ (೧೯೭೯), ಪ್ರಶ್ನೆ (೧೯೮೨), ಜೀವಸಾವುಗಳ ನಡುವೆ (೧೯೮೪), ಹಂಗ ಹೇಳಲೆ ಗೆಳತಿ (೧೯೮೯). ಇವರ 'ಗುಬ್ಬೀಮನಿ' ಕವನವು ಗಂಡು-ಹೆಣ್ಣು ಇಬ್ಬರ ಬದುಕಿಗೂ ಒಂದು 'ಬೇಲಿ' ಇರಬೇಕೆಂದು ಹೇಳುತ್ತದೆ.

ತಿರುಗಿ ನಾವಿಬ್ರು ಸಣ್ಣವ್ರಾಗಿ

ನಾ ಗುಬ್ಬೀಮನಿ ಕಟ್ಟೇನು

ನೀ ಬೇಲಿ ಕಟ್ಟೇನು

ನಾವಿಬ್ರೂ ಆ ಬೇಲಿ ಒಳಗಿನ ಗುಬ್ಬಿ ಮನ್ಯಾಗ ಕುಂತು

ಬೆಳ್ಳಗೆ ಬೆಂಕಿ ಕಾಸಬೇಕೂ. . . .[೧]

ಹೆಣ್ಣಿಗೆ ಮಾತ್ರ 'ಬೇಲಿ' ಹಾಕಿ 'ಸ್ವಚ್ಛಂದ'ವಾಗಿ ತಿರುಗುವ ಗಂಡಿಗೆ ಕವಯಿತ್ರಿ, ಬೇಲಿ ಎಂಬುದು ಹೆಣ್ಣಿಗೆ ಸೀಮಿತವಲ್ಲ, ಅದು ಇಬ್ಬರಿಗೂ ಇರಬೇಕೆಂದು ಹೇಳುವ ಮೂಲಕ ಗಂಡಿನ ಸ್ವೇಚ್ಛಾಚಾರಕ್ಕೆ ಕಡಿವಾಣ ಹಾಕಲೆತ್ನಿಸಿದ್ದಾರೆ.

**ಹೇಮಾ ಪಟ್ಟಣಶೆಟ್ಟಿ:-** ತಮ್ಮ ವಿಭಿನ್ನ ಧ್ವನಿಯ ಮೂಲಕ ವಿಶಿಷ್ಟ ಎನಿಸಿದ ಕವಯಿತ್ರಿ ಈಕೆ. ಇವರ ಕವನ ಸಂಕಲನಗಳು ವಿರಹೋತ್ಸವ, ಹೊಸಹಾಡು. ಇವರ ಕಾವ್ಯಗಳ ಭಾಷಾ ಪ್ರೌಢಿಮೆ ಅನನ್ಯವಾದುದು. ಇವರ 'ಹತ್ತರಲಿ ಹನ್ನೊಂದಾಗಿ' ಕವನವು ಆತ್ಮವಿಶ್ವಾಸವನ್ನು, ಬದುಕಿನ ಆಶಾವಾದಿತನವನ್ನು ಎತ್ತಿ ಹಿಡಿಯುತ್ತದೆ. 'ಹತ್ತರಲಿ ಹನ್ನೊಂದಾಗಿ ಬಾಳಲೊಲ್ಲೆ', 'ಸಾಯಲೊಲ್ಲೆ ಹತ್ತರಲಿ ಹನ್ನೊಂದಾಗಿ' ಎನ್ನುವ ದಿಟ್ಟತನ, ಮಹಿಳಾ ಸಾಹಿತ್ಯವನ್ನು ಪ್ರತ್ಯೇಕಿಸುವ ಬಗೆಗೆ ದನಿ ಎತ್ತುತ್ತದೆ. 'ಗಂಡನೊಳಗಿನ ಗಂಡು ಹುಡುಗ' ಕವನವು ಮದುವೆಯಾಗುವ ಮುನ್ನ ಗಂಡು ಹುಡುಗನಾಗಿದ್ದವನು, ಮದುವೆಯ

---

೧) ಪೂರ್ವೋಕ್ತ -೧೩೩.

ನಂತರದಲ್ಲಿ 'ಗಂಡ'ನಾಗಿ ಬದಲಾದ ಪರಿಯನ್ನು, ಹೆಣ್ಣಿಗೆ 'ಗಂಡನಿಗಿಂತ ಗಂಡು ಹುಡುಗನೇ ಆಪ್ತನೆನಿಸುವ ಬಗೆಯನ್ನು ಹೇಳುತ್ತದೆ.

ಗಂಡ ಸಿಗಬಹುದು, ಗಂಡು

ಸಿಗಬಹುದು ಗಂಡನೊಳಗಿನ ಗಂಡು

ಹುಡುಗ ಬೇಕೆನಗೆ

ಹುಡುಕ ಬೇಕೆನಗೆ [1]

ಹುಡುಗ 'ಗಂಡ'ನಾಗಿ ಬಿಡುವಲ್ಲಿ ಹೆಣ್ಣಿಗೆ ಆಪ್ತತೆಯ ಅನುಭವ ಅವನಲ್ಲಿ ಕ್ಷೀಣಿಸುತ್ತದೆ. ಅವನಲ್ಲಿ ಅಡಗಿರುವ 'ಹುಡುಗ'ನಿಗಾಗಿ ಆಕೆ ಹುಡುಕುತ್ತಾಳೆ. ಪುರುಷನು ಗೆಳೆಯನಾಗಿದ್ದಾಗ ತೋರುವ ಪ್ರೀತಿಯು ಗಂಡನಾದಾಗ ಅಧಿಕಾರದ ಬಲದಲ್ಲಿ ಅಡಗಿ ಹೋಗುವುದು ಹೆಣ್ಣಿನ ಬಾಳಿನಲ್ಲಿ ದುರಂತವೇ ಸರಿ. ಹೆಣ್ಣಿನ ಮೇಲಿನ ಪ್ರೀತಿಗಿಂತ ಅವಳ ಮೇಲೆ ಅಧಿಕಾರ ಚಲಾಯಿಸುವುದೇ ಅವನಿಗೆ ಮುಖ್ಯವಾಗಿ ಬಿಡುವ ಹಿನ್ನಲೆಯಲ್ಲಿ ಹೆಣ್ಣಿಗೆ ಗೆಳೆಯನ ಅವಶ್ಯಕತೆ ಇರುವುದನ್ನು ಈ ಕವನವು ಧ್ವನಿಸುತ್ತದೆ.

**ಎಚ್ ಎಸ್ ಮುಕ್ತಾಯಕ್ಕ :-** ಇವರು ಕನ್ನಡದ ಪ್ರಮುಖ ಕವಯಿತ್ರಿ. ವೃತ್ತಿಯಲ್ಲಿ ಪ್ರಾಧ್ಯಾಪಕಿ. ಇವರ ಕವನ ಸಂಕಲನಗಳು 'ನಾನು ಮತ್ತು ಅವನು' (೧೯೮೩), 'ನೀವು ಕಾಣಿರೆ ನೀವು ಕಾಣಿರೆ' (೧೯೯೬). ಸ್ತ್ರೀ ಸಂವೇದನೆಯನ್ನು ಇವರ ಕಾವ್ಯ ಒಳಗೊಂಡಿದೆ. 'ನಾನು ಮತ್ತು ಅವನು' ಕವನದಲ್ಲಿ ವಿರಹದ ಭಾವಗಳನ್ನು ನವಿರಾಗಿ ಚಿತ್ರಿಸಲಾಗಿದೆ.

ಅಪ್ಪುಗೆಯ ತೋಳು ಸಡಿಲಾಗಿ

ಅಗಲಿಕೆಯ ಕ್ಷಣ ಬಳಿಸಾರದಂತೆ

ಕಣ್ಣಾಗುವವು ತುಂಬಿದ ಕೊಳ

ಕಣ್ಣಂಚಿನಲಿ ತೇಲುವವು ಕೋಮಲ ಕನಸು [2]

---

೧) ಹೇಮಾ : ವಿರಹೋತ್ಸವ -೪೭

೨) ಸಂ ಆರ್ಯಾಂಬ ಪಟ್ಟಾಭಿ : ಮಹಿಳಾ ಸಾಹಿತ್ಯ ಸಮೀಕ್ಷೆ - ೧೯೪

ಹೆಣ್ಣಿನ ಮನದಾಳದ ಸುಪ್ತ ಭಾವನೆಗಳನ್ನು ಮುಕ್ತವಾಗಿ ತೆರೆದಿಡುವ ಮುಕ್ತಾಯಕ್ಕನ ಕವನಗಳು ಈ ನಿಟ್ಟಿನಲ್ಲಿ ಅತ್ಯಂತ ವಿಶಿಷ್ಟವೆನಿಸುತ್ತವೆ. ಪರಂಪರಾಗತ ಮೌಲ್ಯಗಳು ಹೆಣ್ಣಿನ ಬದುಕನ್ನು ಬಂಧಿಸುವ ಮೂಲಕ ಅವಳ ಸ್ವಾತಂತ್ರ್ಯವನ್ನೇ ಕಸಿದುಕೊಳ್ಳುತ್ತದೆ. 'ಪತಿವ್ರತೆಯರ ಪಟ್ಟಕ್ಕೇರಿ ಪ್ರಾತಃಕಾಲದ ಸ್ಮರಣೆಯಲಿ ಇಂದಿಗೂ ಉಳಿದು ನರಳುತ್ತಿರುವವರು ನಾವು ಪತಿವ್ರತೆಯರಲ್ಲ' ಎನ್ನುವ ಮೂಲಕ ಗಂಡಿನ ಲೈಂಗಿಕ ಸ್ವೇಚ್ಛಾಚಾರವನ್ನು ಗಟ್ಟಿಯಾಗಿ ಖಂಡಿಸುವ ದಿಟ್ಟತನ ತೋರಿದ್ದಾರೆ. ಹೆಣ್ಣಿಗೆ ಪತಿವ್ರತೆಯ ಪಟ್ಟ ಕಟ್ಟಿ ತಾವು ಮಾತ್ರ ಸ್ವೇಚ್ಛೆಯಾಗಿ ಬದುಕುವ ಗಂಡುಗಳಿಗೆ ಇಲ್ಲಿ ಧಿಕ್ಕಾರವಿದೆ.

**ಪ್ರತಿಭಾ ನಂದಕುಮಾರ್ :-** ಜನನ ೧೯೫೫. ಕನ್ನಡದ ಹೆಸರಾಂತ ಕವಯಿತ್ರಿ. ಮುಕ್ತವಾದ ಭಾಷಾ ಬಳಕೆ ಇವರ ವೈಶಿಷ್ಟ್ಯ. ಇವರ ಕವನ ಸಂಕಲನಗಳು ನಾವು ಹುಡುಗಿಯರೇ ಹೀಗೆ (೧೯೮೩), ಈ ತನಕ (೧೯೮೯), ರಸ್ತೆಯಂಚಿನ ಗಾಡಿ (೧೯೯೧), ಕವಡೆಯಾಟ, ಆಹಾ, ಪುರುಷಾಕಾರಂ! (೨೦೦೦), ಅವರು ಪುರಾವೆಗಳನ್ನು ಕೇಳುತ್ತಾರೆ. ಸ್ತ್ರೀ ಸಂವೇದನೆ ಇವರ ಕವನಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. 'ನಾವು ಹುಡುಗಿಯರೇ ಹೀಗೆ' ಎಂಬ ಕವನದಲ್ಲಿ ಎಲ್ಲ ಹುಡುಗಿಯರ ಬದುಕು ಒಂದೇ ರೀತಿಯದ್ದೆಂದು ಹೇಳುತ್ತಾರೆ.

> ನಮ್ಮ ಇಂದಿನ ಅವಸ್ಥೆಗೆ ಇವನೇ ಕಾರಣ
>
> ಅಂತ ರೋಷ ತಾಳುತ್ತೇವೆ.
>
> ಆದರೆ ಮೇಲೆ ನಗುನಗುತ್ತಾ ಅವನ
>
> ಹೆಂಡತಿ ಮಕ್ಕಳ ಯೋಗಕ್ಷೇಮ ವಿಚಾರಿಸುತ್ತೇವೆ
>
> ಯಾಕೆಂದರೆ ಅವಳದೂ ಅದೇ ಕಥೆಯಲ್ಲವೇ? [೧]

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು -೬

'ಅವನನ್ನು' ಬಯಸಿ ಮತ್ತ್ಯಾರನ್ನೋ ವಿವಾಹವಾಗುವ ಎಲ್ಲ ಹೆಣ್ಣುಗಳ ಕಥೆಯು ಒಂದೇ. 'ಅವನೇ' ಬೇಕು ಎಂದು ಹೇಳಲು ಧೈರ್ಯ ಸಾಲದೆ ಇಷ್ಟವಿಲ್ಲದಿದ್ದರೂ ಇನ್ಯಾರನ್ನೋ ವಿವಾಹವಾಗಿ ಜೀವನ ಪರ್ಯಂತ ನೋವನುಭವಿಸುವ, ಗಂಡನಲ್ಲೇ 'ಅವನನ್ನು' ಕಾಣುವ ಹಂಬಲ ಎಲ್ಲ ಹುಡುಗಿಯರದ್ದೆಂಬ, ಈ ಮೂಲಕ ಹುಡುಗಿಯರೆಲ್ಲರೂ ಹೀಗೆ ಎನ್ನುವ ಪ್ರತಿಭಾ ಎಲ್ಲ ಹುಡುಗಿಯರ ಬದುಕಿನ ದುರಂತವನ್ನು ಚಿತ್ರಿಸುತ್ತಾರೆ. ಪರಂಪರಾಗತವಾಗಿ ಬಂದ ಮೌಲ್ಯಗಳನ್ನು ಖಂಡಿಸುವ ಇವರು ಪತಿವ್ರತಾ ಧರ್ಮದ ಬಗ್ಗೆ 'ಪತಿವ್ರತೆ ಅಲ್ಲ' ಕವನದಲ್ಲಿ ಹೀಗೆ ಹೇಳಿದ್ದಾರೆ.

> ಅದೊಂದು ವ್ರತವೇ ಆಗಿರಲಿಲ್ಲ ದೇವರೇ
>
> ಮರಳಿನ ಮಡಕೆಯಲ್ಲಿ ನೀರು ತುಂಬಿ ತಂದು
>
> ಶೂನ್ಯ ಲಿಂಗಕ್ಕೆ ಅಭಿಷೇಕ ಮಾಡಿ ಉರಿಸಿ ಕಲ್ಲಿನ ಕರ್ಪೂರ
>
> ತೊಡೆ ಉಜ್ಜಿ ಬಂದ ಕಸದಲ್ಲಿ ಗಣಪನನ್ನು ಸೃಷ್ಟಿಸಿ ಕಾವಲಿಡುತ್ತಿದ್ದ
>
> ಮಜ್ಜನಕ್ಕಿಳಿದಾಗ ಸಜ್ಜನಳಂತೆ ಮರೆಯಾಗುತ್ತಿದ್ದ.[೧]

ಪತಿವ್ರತಾ ಧರ್ಮವನ್ನು ಕವಯಿತ್ರಿ, ತೀವ್ರವಾಗಿ ಖಂಡಿಸಿದ್ದಾರೆ. ಅದು ವ್ರತವಲ್ಲ ಎನ್ನುವ ದಿಟ್ಟತನ ತೋರಿದ್ದಾರೆ. ಪತಿವ್ರತೆ ಎಂಬ ಹೆಸರಿನಲ್ಲಿ ಅನೇಕ ಕಥೆಗಳನ್ನು ಹೇಳಿ ಸ್ತ್ರೀಯರನ್ನು ವಂಚಿಸಿ ಬಂಧಿಸುವ ಪುರುಷ ಮೌಲ್ಯಗಳನ್ನು ಧಿಕ್ಕರಿಸಿ, ನೇರವಾಗಿ ಪರಪುರುಷನಿಗೆ ಆಹ್ವಾನವೀಯುವ ಧೀರೆ ಈಕೆ. ಈ ಮೂಲಕ ಪಾರಂಪರಿಕ ಮೌಲ್ಯಗಳನ್ನು ಗಟ್ಟಿಯಾಗಿ ಖಂಡಿಸಿದ್ದಾರೆ.

**ಎಂ ಎಸ್ ವೇದಾ :-** ಜನನ ೧೯೬೫. ಆಧುನಿಕ ಕನ್ನಡ ಕವಯಿತ್ರಿ, ಈಕೆ. ಇವರ ಕವನ ಸಂಕಲನಗಳು ಕಾವ್ಯ ಕೂಸು (೧೯೮೫), ಗಂಗೋತ್ರಿಯಲ್ಲಿ (೧೯೮೭), ಬಿಳಲುಗಳು (೧೯೮೯), ದಾಖಲಾಗುವುದು ಬೇಡ. ವೇದಾ ಅವರ ಕವನಗಳು ಸರಳ ಹಾಗೂ ನೇರ. ಪ್ರಗತಿಪರ ಧೋರಣೆ, ಸ್ತ್ರೀ ಸಂವೇದನೆ ಎದ್ದು ಕಂಡು ಬರುತ್ತದೆ.

---

೧) ಪೂರ್ವೋಕ್ತ - ೮೫

ಇವರ 'ಸಂಗಾತಿ'ಗೆ ಕವನದಲ್ಲಿ

ನಾನೇಕೆ ಬಳ್ಳಿ ನೀನೇಕೆ ಮರ

ನನ್ನ ಕಾಲ ಮೇಲಲ್ಲವೇ ನನ್ನ ನಿಲುವು

ನನ್ನ ಬಾಳಿಗೂ ಇಲ್ಲವೇ ನಿನ್ನಂತೆ ಛಲವು [1]

ಹೆಣ್ಣನ್ನು ಬಳ್ಳಿಯಾಗಿಸಿ ಪುರುಷಾಧೀನೆಯಾಗಿ ಮಾಡಿದ್ದನ್ನು ಪ್ರಶ್ನಿಸುವ ವೇದಾ ತನಗೊಂದು ಸ್ವತಂತ್ರ ಅಸ್ತಿತ್ವವಿರುವುದನ್ನು , ತನ್ನ ಬಾಳಿಗೊಂದು ಛಲ, ಧ್ಯೇಯ ಇರುವುದನ್ನು ಎತ್ತಿಹಿಡಿಯುವ ಮೂಲಕ ಇದುವರೆಗೂ ಇದ್ದ ರೂಢಿಗತ ಮೌಲ್ಯಗಳನ್ನು ಧಿಕ್ಕರಿಸಿದ್ದಾರೆ. 'ಬಿಳಲುಗಳು' ಕವನದಲ್ಲಿ ಪರಂಪರಾಗತ ಮೌಲ್ಯಗಳಿಂದಾಚೆಗೆ ಬರಲಾಗದ ಹೆಣ್ಣಿನ ಸ್ಥಿತಿಯ ಚಿತ್ರಣವಿದೆ. ಆದರೂ ಅದರಿಂದ ಮುಕ್ತಗೊಳ್ಳಲು ಮನಸ್ಸು ಮಾತ್ರ ಸದಾ ಹಾತೊರೆಯುತ್ತದೆ.

ಬೀಜವೊಂದು ಸಿಡಿದು

ಅಜ್ಜಿ ನೆಟ್ಟಾಲ ಆವರಿಸಿರುವ

ನೆಲದ ಪರಿಧಿಯ ದಾಟಿ

ತನ್ನದೇ ಅಸ್ತಿತ್ವ ಪಡೆದು

ತಲೆಯೆತ್ತಿ ನಿಲ್ಲುವ ನೋಟಕ್ಕಾಗಿ

ಕಾದು ಕೂತಿದ್ದೇನೆ

ಕಾಲ ನೂಕಿದ್ದೇನೆ. [2]

ಇಲ್ಲಿ ಗಂಡಿಗೆ ಅವನು ಬಯಸಿದಂತಾಗುವ ಸ್ವಾತಂತ್ರ್ಯವಾದರೂ ಇದೆ. ಆದರೆ ಹೆಣ್ಣಿಗೆ ಅಜ್ಜಿಯ ಆಲದ ಬಿಳಲುಗಳಲ್ಲಿ ಸಿಲುಕಿ ಜೀವನವಿಡೀ ನರಳಬೇಕಾಗುವ ಯಾತನೆಯನ್ನು, ಅದರಿಂದ ಹೊರಬರಲು ಪರಿತಪಿಸುವ ಹೆಣ್ಣಿನ ಮನಸ್ಥಿತಿಯನ್ನು ಚಿತ್ರಿಸುತ್ತಾರೆ ವೇದಾ.

---

೧) ಎಂ ಎಸ್ ವೇದಾ : ಬಿಳಲುಗಳು -೧೩

೨) ಪೂರ್ವೋಕ್ತ - ೨೩

**ಬಿ ಟಿ ಲಲಿತಾ ನಾಯಕ್ :-** ಕನ್ನಡ ಕಾವ್ಯಲೋಕದ ವಿಶಿಷ್ಟ ಕವಯಿತ್ರಿ ಈಕೆ. ದೇಶ, ಭಾಷೆಗಳ ಬಗೆಗೆ ಅಪಾರ ಅಭಿಮಾನವಿರುವ, ಅನ್ಯಾಯಗಳ ವಿರುದ್ಧ ಬಂಡಾಯದ ಧ್ವನಿ ಎತ್ತುವ ಇವರು ಶೋಷಿತರ ಪರ ಹೋರಾಡುವ ಮನೋಭಾವದವರು. ಅಸ್ಪೃಶ್ಯತೆ, ಜಾತಿ ಪದ್ಧತಿ, ಲಿಂಗಭೇದ ನೀತಿಯ ವಿರುದ್ಧ ಗಟ್ಟಿಯಾಗಿ ವಿರೋಧಿಸಿದವರು. ಇವರ ಕವನ ಸಂಕಲನಗಳು ನಂರೂಪ್ಷಿ (೧೯೮೩), ಇದೇ ಕೂಗು ಮತ್ತೆ ಮತ್ತೆ (೧೯೮೬.), ಒಡಲಬೇಗೆ (೧೯೯೬).

"ಗಣಿಕೆಯಲ್ಲವೋ ನಾನು

ದೇವ ದೆವ್ವದ ದಾಸಿಯಲ್ಲ

ನಾನೀ ನೆಲದ ಕೂಸೆಂದು" ಕೂಗಿಹೇಳು. [೧]

ದೇವದಾಸಿಯಂತಹ ಅನಿಷ್ಟ ಪದ್ಧತಿ ಹೆಣ್ಣನ್ನು ಪುರುಷನ ದಾಸಿಯನ್ನಾಗಿ ಮಾಡಿಕೊಂಡು ಅವಳ ಅಸ್ತಿತ್ವವನ್ನೇ ನಾಶಗೈದಿದೆ. ಇಂತಹ ಕ್ರೂರ ವ್ಯವಸ್ಥೆಯ ವಿರುದ್ಧ ತಾನು ಯಾರ ದಾಸಿಯೂ ಅಲ್ಲ ಎಂದು ಹೆಣ್ಣು ಕೂಗಿ ಹೇಳಬೇಕಿದೆ. ಪುರುಷರು ತಮ್ಮ 'ಸುಖ'ಕ್ಕಾಗಿ ಹೆಣ್ಣಿನ ಜೀವನವನ್ನೇ ನಾಶ ಮಾಡುವುದರ ವಿರುದ್ಧ ಇಲ್ಲಿ ಪ್ರತಿಭಟನೆಯಿದೆ.

ನನ್ನ ಬುದ್ಧಿ-ಕೌಶಲ್ಯ-ಪ್ರತಿಭೆಗಳೇನಿದ್ದರೂ

ನಿನ್ನ ಹೊಟ್ಟೆ ನೆತ್ತಿ ಪೋಷಣ ಮಾಡುವಷ್ಟಕ್ಕೆ

ನನ್ನ ಅಂಗಾಂಗಗಳು ನಿನ್ನ ಇಂದ್ರಿಯಗಳಿಗೆ

ಸ್ಫೂರ್ತಿ-ಚೇತನ-ಖುಷಿ ನೀಡುವಷ್ಟಕ್ಕೆ

ಸೀಮಿತವೆಂದು ನಿರ್ಣಯಿಸಿರುವ ನಿನ್ನ

ಶತಮಾನಗಳ ಗೊಡ್ಡು ನಂಬಿಕೆಗೆ

'ಧಿಕ್ಕಾರ'ಕ್ಕಿಂತ ಮಿಗಿಲಾದ

ಶಕ್ತಿಯುತ ಶಬ್ದಕ್ಕಾಗಿ ಹುಡುಕುತ್ತಿದ್ದೇನೆ. [೨]

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೧೦

೨) ಪೂರ್ವೋಕ್ತ - ೧೧೪

ಮದುವೆಯಾದ ಹೆಣ್ಣಿನ ಬಾಳನ್ನು ಮದುವೆಯಾದ ಕಾರಣಕ್ಕೆ ಮೊಟಕುಗೊಳಿಸುವ, ಅವಳ ಜೀವನದಲ್ಲಿ ಬೆಳವಣಿಗೆಯನ್ನೇ ನಿರಾಕರಿಸಿ ಸ್ಥಗಿತಗೊಳಿಸಿ ಅವಳನ್ನು 'ಚಿಲ್ಲರೆ'ಯಾಗಿಸುವ ಗಂಡಸಿನ ವಿರುದ್ಧ ತೀವ್ರವಾದ ಪ್ರತಿಭಟಿಸುತ್ತಾರೆ. ಹೆಣ್ಣನ್ನು ಕೇವಲ ಭೋಗದ ವಸ್ತುವನ್ನಾಗಿ ಮಾಡಿದ ವ್ಯವಸ್ಥೆಯ ವಿರುದ್ಧ ಆಕ್ರೋಶ ವ್ಯಕ್ತವಾಗಿದೆ. ಇದು ಹೆಣ್ಣಿನ ಆಧುನಿಕ ಚಿಂತನೆಯ ಪರಿಣಾಮದಿಂದ ಸಾಧ್ಯವಾಗಿದೆ. ಲಲಿತಾ ನಾಯಕ್ ಈ ಮೂಲಕ ದಿಟ್ಟ ಕವಯಿತ್ರಿ ಎನಿಸಿದ್ದಾರೆ.

**ಸ ಉಷಾ :-** ಇವರ ಜನನ ೧೯೫೪, ಮೈಸೂರಿನಲ್ಲಿ. ಇವರ ಕವನ ಸಂಕಲನಗಳು ತೂಗಲು ಗೊಂಬೆಯ ಆತ್ಮಕಥೆ (೧೯೮೬), ಈ ನೆಲದ ಹಾಡು (೧೯೯೧), ಹವಳ ಹಾರಿದ ಹೊತ್ತು (೨೦೦೫). ಇವರಿಗೆ ಹಲವಾರು ಪ್ರಶಸ್ತಿಗಳು ಲಭಿಸಿವೆ. ಇವರ 'ಹವಳ ಹಾರಿದ ಹೊತ್ತು' ಕವನವು ಹಾರದ ಹವಳವನ್ನು ಹೆಣ್ಣಿನ ಬದುಕಿನ ಜೊತೆ ಸಮೀಕರಿಸಿ ರಚಿಸಿದ್ದಾರೆ.

> ನನ್ನಮ್ಮ ಅವಳಮ್ಮ ಅವಳಮ್ಮ
> ಹೇಳುತ್ತಾರೆ
> ಯಾವ ಹವಳಮ್ಮನೂ ಸುತ್ತುವುದಿಲ್ಲ
> ಅಮ್ಮಂದಿರೆಲ್ಲ ಬೇರು ಬಿಟ್ಟು
> ಕನ್ನಿಕೆಯರ ಬೆಳೆಸುತ್ತಾರೆ.[೧]

ಹೆಣ್ಣಿಗೆ ಅವಳ ತಾಯಂದಿರ ಮೂಲಕ ಬಳುವಳಿಯಾಗಿ ಬರುವ ಪಾರಂಪರಿಕ ಮೌಲ್ಯಗಳು ಅವಳನ್ನು ಹೊಸ ಚಿಂತನೆಗಳೆಡೆಗೆ ಚಲಿಸದಂತೆ ಬಂಧಿಸಿಡುವಲ್ಲಿ ಯಶಸ್ವಿಯಾಗಿವೆ. ಆದರೆ ಅತಿಯಾದ ಬಂಧನದ ಬಿಗಿಯ ನಡುವೆಯೂ ಸ್ವಾತಂತ್ರ್ಯದ ಚಿಗುರು ಮೂಡಲು ಸಾಧ್ಯ ಎಂಬುದನ್ನು ಸಾಲ್ಮನ್ ರೆಕ್ಕೆ ಬಳಸಿ ಹಾರುವ ಹವಳದ ಮೂಲಕ ಉಷಾ ತೋರಿಸಿ ಕೊಟ್ಟಿದ್ದಾರೆ.

**ಎಂ ಆರ್ ಕಮಲ :-** ಜನನ ೧೯೫೯. ಉಪನ್ಯಾಸಕಿಯಾದ ಇವರು ಪ್ರಮುಖ ಕವಯಿತ್ರಿ. ಇವರ ಕವನ ಸಂಕಲನಗಳು ಶಕುಂತಲೋಪಾಖ್ಯಾನ (೧೯೮೭), ಜಾಣೆ ಮತ್ತು ಇತರ ಕವಿತೆಗಳು (೧೯೯೩), ಕತ್ತಲ ಹೂವಿನ ಹಾಡು (ಅನುವಾದ ಕೃತಿ).

---

೧) ಸ ಉಷಾ : ಹವಳ ಹಾರಿದ ಹೊತ್ತು -೧೮

ಪಾರಂಪರಿಕ ವಿಚಾರಗಳನ್ನು ಹೊಸ ಚಿಂತನೆಗಳ ಒರೆಗಲ್ಲಿಗೆ ಹಚ್ಚಿ ನೋಡುವವರು ಕಮಲ. 'ನಾನು' ಎಂದರೆ 'ಸೀತೆಯಲ್ಲ, ದ್ರೌಪದಿಯಲ್ಲ, ಚಿತ್ರಾಂಗದೆಯಲ್ಲ, ಸಾವಿತ್ರಿಯೂ ಅಲ್ಲ' ಎನ್ನುವ ಮೂಲಕ ಪಾರಂಪಿಕ ಸ್ತ್ರೀ ಮಾದರಿಗಳನ್ನು ತಿರಸ್ಕರಿಸಿ 'ನಾನು' ಮಾನವೀಯ ಭಾವನೆಗಳ ಮೊತ್ತ ಮಾತ್ರವೆನ್ನುವಲ್ಲಿ ತನ್ನ ಅಸ್ತಿತ್ವದ ಬಗೆಗೆ ಕವಯಿತ್ರಿ ಸ್ಪಷ್ಟ ನಿಲುವನ್ನು ತಾಳಿದ್ದಾರೆ.

ಧಾವಿಸಿ ಬಂದ ದುಷ್ಯಂತ। ದೂರ್ವಾಸರ ಶಾಪ, ಉಂಗುರದ ನೆಪ

ಒಡ್ಡಿ ನಿಂತವನ ನೋಡಿ ನಕ್ಕಳು

(ನೋವುಂಡು ನಕ್ಕ ನಗೆಯಲ್ಲ)

ಚಿಗುರು ಬೆರಳಿಗೆ ಮತ್ತೆ ಉಂಗುರದ ಸಂಭ್ರಮ

ಹಿಮಗಟ್ಟಿದ ಹುಡುಗಿ ಅಲ್ಲಲ್ಲ ಪ್ರೌಢೆ

ಥಣ್ಣಗೆ ನುಡಿದಳು । ನನಗೆ ಈ ಉಂಗುರದಲ್ಲಿ ನಚ್ಚಿಗೆಯಿಲ್ಲ[೧]

'ಶಕುಂತಳೋಪಾಖ್ಯಾನ'ದ ಈ ಸಾಲುಗಳು ಪುರಾಣ ಪಾತ್ರಗಳು, ಅದರಲ್ಲೂ ಪ್ರೌಢ ಹೆಣ್ಣಿನ ಪ್ರತಿಭಟನೆ ಶಬ್ದರೂಪ ಪಡೆದಿರುವುದನ್ನು ಎತ್ತಿ ಹಿಡಿಯುತ್ತದೆ. ಇವಳು ಹುಡುಗಿ ಅಲ್ಲ ಪ್ರೌಢೆ. ಸಮಾಜದ ಅನ್ಯಾಯಗಳಿಗೆ ತಲೆಯೊಡ್ಡದ ಅದನ್ನು ಪ್ರತಿಭಟಿಸುವ ಸಾಮರ್ಥ್ಯ ಹೊಂದಿರುವ ಹೆಣ್ಣು ಹೀಗೆ ಪರಂಪರೆಯ ಸ್ತ್ರೀ ಮಾದರಿಗಳು ಹೊಸ ಚಿಂತನೆಗಳಲ್ಲಿ ತಮ್ಮ ದಾಸ್ಯವನ್ನು ಪ್ರತಿಭಟಿಸುವ ಶಕ್ತಿ ಪಡೆಯಲು ಸಾಧ್ಯವಾಗಿದೆ.

**ಸವಿತಾ ನಾಗಭೂಷಣ :-** ಜನನ ೧೯೬೧. ಇವರು ಚಿಕ್ಕಮಗಳೂರಿನವರು. ಕನ್ನಡ ಕಾವ್ಯಲೋಕದ ಪ್ರಮುಖ ಕವಯಿತ್ರಿಯರಲ್ಲೊಬ್ಬರು. ಇವರ ಕವನ ಸಂಕಲನಗಳು ನಾ ಬರುತ್ತೇನೆ ಕೇಳು (೧೯೮೭), ಚಂದ್ರನನ್ನು ಕರೆಯಿರಿ ಭೂಮಿಗೆ (೧೯೯೧), ಹೊಳೆ ಮಗಳು ಹಾಗೂ ಜಾತ್ರೆಯಲ್ಲಿ ಶಿವ. ಇವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಇವರು ಪ್ರಕೃತಿ ಪ್ರೇಮಿ. ಪ್ರಕೃತಿ ಕುರಿತ ಹಲವಾರು ಕವನಗಳನ್ನು ರಚಿಸಿದ್ದಾರೆ. ಬೆಟ್ಟ, ಗುಡ್ಡ, ಹೊಳೆ, ಆಕಾಶ, ಚಂದ್ರ, ನಕ್ಷತ್ರ ಎಲ್ಲವೂ ಇವರ ಕಾವ್ಯದ ವಸ್ತು.

---

೧) ವಿವಿಧ ಲೇಖಕರು : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ -೬೬.

'ಹೂವು' ಕವನದಲ್ಲಿ

> ಏ... ಹೂವೆ
>
> ನಿನ್ನ ಭಾವ ನನಗೆ ಅರ್ಥವಾಗುವುದು
>
> ನನ್ನ ಆಶೆ ನಿನ್ನಂತೆ ಆಗುವುದು [1]

ಪ್ರಕೃತಿ ಮತ್ತು ಮನುಷ್ಯನ ನಡುವಿನ ಸಂಬಂಧ, ಪ್ರಕೃತಿಯೊಂದಿಗೆ ಪ್ರತಿಕ್ರಿಯಿಸುವ ಮನುಷ್ಯ ಸಂವೇದನೆಗಳ ಚಿತ್ರಣವಿದೆ. 'ನಾನು ಮತ್ತು ಅವನು' ಕವನದಲ್ಲಿ,

> ಅವನ ಕಣ್ಣಲ್ಲೆ ಕರಗುತ್ತ
>
> ಅವನೊಳಗೆ ಇಳಿದಿದ್ದೇನೆ
>
> ಲಯವಾಗಿದ್ದೇನೆ. [2]

ಎನ್ನುವಲ್ಲಿ ಗಂಡು-ಹೆಣ್ಣಿನ ನಡುವಿನ ಅಗಾಧ ಒಲವು, ಪರಸ್ಪರ ಸಂಬಂಧದ ಚಿತ್ರಣವಿದೆ. ಇವರ ಕವನಗಳು ಸಹೃದಯರಲ್ಲಿ ಆತ್ಮೀಯ ಭಾವವನ್ನು ಮೂಡಿಸುತ್ತವೆ.

**ವೈದೇಹಿ :-** ಇವರ ನಿಜನಾಮ ಜಾನಕಿ. ಜನನ ೧೯೪೫. ಇವರದು ಉಡುಪಿ ಜಿಲ್ಲೆಯ ಕುಂದಾಪುರ. ಕನ್ನಡದ ಅತ್ಯಂತ ಸುಪ್ರಸಿದ್ಧ ಕವಯಿತ್ರಿ ಈಕೆ. ಕವಿತೆ, ಸಣ್ಣಕತೆ, ಕಾದಂಬರಿ, ಲಲಿತ ಪ್ರಬಂಧ, ವ್ಯಕ್ತಿಚಿತ್ರಣ, ಮಕ್ಕಳ ನಾಟಕ ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ದುಡಿದಿದ್ದಾರೆ. ಇವರ ಕವನ ಸಂಕಲನಗಳು ಬಿಂದು ಬಿಂದಿಗೆ (೧೯೯೦), ಪಾರಿಜಾತ (೧೯೯೯). ಇವರ 'ಬೆರಣಿ ತಟ್ಟುವ ಹುಡುಗಿ ಮತ್ತು ಚಂದ್ರಾಮ ದೇವರು', 'ಶಿವನ ಮೀಸುವ ಹಾಡು', 'ಅಡುಗೆ ಮನೆಯ ಹುಡುಗಿ' ಮುಂತಾದವು ಪ್ರಮುಖ ಕವಿತೆಗಳು. ಹೆಣ್ಣಿನ ಅಂತರಂಗದ ಭಾವನೆಗಳನ್ನು ಈ ಕವಿತೆಗಳು ಪೂರ್ಣವಾಗಿ ಹಿಡಿದಿಟ್ಟಿವೆ. ಶಿವನ ಮೀಸುವ ಹಾಡು ಕವನದಲ್ಲಿ ಪಾರ್ವತಿಯ ತಳಮಳ, ಶಿವನ ಸುಳ್ಳುಗಾರಿಕೆ ವ್ಯಕ್ತವಾಗಿದೆ.

---

೧) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂಗಳು -೧೯೯

೨) ಪೂರ್ವೋಕ್ತ -೪೩

'ನನ್ನನೇನೆಂದುಕೊಂಡೆ? ನಿನ್ನ ಬಿಟ್ಟರೆ ಶುದ್ಧ ಬೈರಾಗಿ'

'ಈ ಮಾತಿಗೆ ಶಿವನೇ, ನಾನೆಷ್ಟನೆಯ ನಾರಿ?'

ಎನ್ನುತ್ತ ಮೃದು ಚಿವುಟ ಮೀಸುವಳು ನಮ್ಮ ಗೌರಿ. [1]

ಮರುಷನ ಪರಸ್ತ್ರೀ ಮೋಹ, ಸ್ತ್ರೀಯಲ್ಲಿ ಉಂಟುಮಾಡುವ ಆತಂಕ, ದುಃಖ ಆದರೆ ಅದನ್ನು ಪ್ರತಿಭಟಿಸಲಾಗದ ನೋವನನುಭವಿಸುವ ಅವಳ ಮನಸ್ಥಿತಿ, ಆಕೆಯ ತಳಮಳವನ್ನು ಈ ಕವಿತೆ ಚಿತ್ರಿಸುತ್ತದೆ. 'ಅಡುಗೆ ಮನೆಯ ಹುಡುಗಿ' ಕವನದಲ್ಲಿ

ಪ್ರತಿ ಪ್ರಾಣಿಗೂ ಒಂದು ಹೊಟ್ಟೆ ಇದ್ದ ಹಾಗೆ

ಅವಳ ಅಡುಗೆ ಮನೆ

ಯಾರ ಸಿದ್ಧಾಂತ ಪಾಕವೋ

ಬಾಗಿಲಿಲ್ಲ ಕಿಟಕಿಯಿಲ್ಲ

ಹೊಗೆ ನಳಿಗೆಯೂ ಇಲ್ಲ

ಕೊನೇಗೊಂದು ಕಿರು ಕಿಂಡಿಯಾದರೂ...

ಹಂಬಲಿಸುತ್ತಾಳೆ. [2]

ಹೆಣ್ಣಿನ ಜೀವನದ ದೊಡ್ಡ ಬಂಧನ ಈ ಅಡುಗೆ ಮನೆ. ಶತಶತಮಾನಗಳಿಂದ ಕಿರುಕಿಂಡಿಯೂ ಇಲ್ಲದಿರುವ ಈ ಸ್ಥಳದಲ್ಲೇ ಜೀವವನ್ನೇ ಸವೆಸಿದ, ಸ್ವತಂತ್ರವಾಗಲು ಹಂಬಲಿಸುವ ಪ್ರತಿ ಹೆಣ್ಣಿನ ತಳಮಳ ಈ ಕವನದಲ್ಲಿ ವ್ಯಕ್ತವಾಗಿದೆ. ವೈದೇಹಿಯವರ ಕವಿತೆಗಳು ಇಂತಹ ಹೆಣ್ಣಿನ ಸಂವೇದನೆಗಳನ್ನು ಕಟ್ಟಿಕೊಡುವಲ್ಲಿ ಸಂಪೂರ್ಣ ಯಶಸ್ವಿಯಾಗಿವೆ.

---

೧) ವೈದೇಹಿಯವರ ಆಯ್ದ ಕವಿತೆಗಳು -೨೪

೨) ಪೂರ್ವೋಕ್ತ -೨೨

**ಸುಕನ್ಯಾ ಮಾರುತಿ :-** ಕನ್ನಡ ಕಾವ್ಯ ಕ್ಷೇತ್ರದ ಮತ್ತೊಬ್ಬ ಪ್ರಮುಖ ಕವಯಿತ್ರಿ ಸುಕನ್ಯಾ ಮಾರುತಿ. ಇವರ ಕವನ ಸಂಕಲನಗಳು ಪರಿಸದಲ್ಲಿ, ಪಂಜಾಗ್ನಿ ಮಧ್ಯೆ, ನಾನು-ನನ್ನವರು, ತಾಜಮಹಲಿನ ಹಾಡು, ಬಿಂಬದೊಳಗಣ ಮಾತು, ಕವನಗಳಿರಾ. ಇವರ ಕವನಗಳು ಆತ್ಮ ನಿವೇದನೆ, ವೈಯಕ್ತಿಕ ಭಾವನೆಗಳಿಗೆ ಒತ್ತು ನೀಡುತ್ತವೆ. ಇದುವರೆಗೂ ಪುರುಷ ಸ್ಥಾಪಿತ ಮೌಲ್ಯಗಳನ್ನೇ ಒಪ್ಪಿ ಬದುಕುತ್ತಿದ್ದ ಹೆಣ್ಣು ಇಂದು ತನ್ನ ಅಸ್ತಿತ್ವಕ್ಕಾಗಿ ಹುಡುಕಾಟ ನಡೆಸಿದ್ದಾಳೆ.

ನನ್ನೊಳಗೆ ಎಲ್ಲೋ

ಕಳೆದಿರುವ "ನನ್ನ"

ಹುಡುಕುತ್ತಿದ್ದೇನೆ.[೧]

ಹುಡುಗಿಯಾದ ಕಾರಣಕ್ಕೆ ತನ್ನ ಜೀವನವನ್ನೆಲ್ಲಾ ಅಡುಗೆ ಮನೆಯಲ್ಲಿ ವ್ಯಯಿಸಬೇಕಾದ, ಗಂಡನ ಅವಶ್ಯಕತೆಗಳನ್ನು ಪೂರೈಸುವುದೇ ಪರಮ ಧ್ಯೇಯವೆಂದು ಭಾವಿಸಿ ಬದುಕಬೇಕಾದ ಹೆಣ್ಣು ಇಲ್ಲಿ ತನ್ನ ಕಳೆದು ಹೋಗಿರುವ ಅಸ್ತಿತ್ವವನ್ನು ಶೋಧಿಸುವ ಪ್ರಯತ್ನ ನಡೆಸಿದ್ದಾಳೆ. ಇದು ಒಬ್ಬ ಹೆಣ್ಣಿನ ವ್ಯಥೆಯಲ್ಲ. ಎಲ್ಲ ಹೆಂಗಸರ ಜೀವನದಲ್ಲಿನ 'ಸಾಮಾನ್ಯ' ಸಂಗತಿ. ಮದುವೆಯಾದ ನಂತರ ಹೆಣ್ಣಿನ ಅವಶ್ಯಕತೆಗಳನ್ನು ಪೂರೈಸಬೇಕಾದ ಗಂಡು ಅದರಿಂದ ವಿಮುಖನಾಗಿ ಕೇವಲ ಪ್ರೀತಿಯ ಮಾತನ್ನಾಡಿದರ ಬದುಕು ಸಾಧ್ಯವಿಲ್ಲ.

ನಾ ಸತ್ತ ಮೇಲೆ ಜನ ಮೆಚ್ಚಿಕೊಳ್ಳುವ

ತಾಜಮಹಲು-ಗೋಳುಗುಮ್ಮಟಗಳು

ನನಗೆ ಬೇಡ ಹುಜೂರ

ನಾನಿರುವಾಗಲೇ

ರೊಟ್ಟಿ-ಬಟ್ಟೆ ತಲೆಯ ಮೇಲೊಂದು ಸೂರು

ಕೊಟ್ಟು ನೋಡು

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೦೫

ಯಾವ ಮಮತಾಜ ರಂಭಾಳಿಗಿಂತ

ಮಿಗಿಲಾಗಿ ಪ್ರೀತಿಸುತ್ತೇನೆ.[1]

ಬದುಕಿನ ಮೂಲಭೂತ ಅವಶ್ಯಕತೆಗಳನ್ನೇ ಈಡೇರಿಸದಿದ್ದರೆ ಅಂತಹ ಪ್ರೀತಿ ವ್ಯರ್ಥವೆನಿಸುತ್ತದೆ. ಸತ್ತ ನಂತರ ಪ್ರೀತಿಯ ಆಳವನ್ನು ಜಗತ್ತಿಗೆ ತೋರಿಸಲು ಕಟ್ಟಿಸುವ ಮಹಲುಗಳಿಗಿಂತ ಬದುಕಿದ್ದಾಗ ಸಂಗಾತಿಯ ಜೀವನಾವಶ್ಯಕತೆ ಪೂರೈಸುವ ಪ್ರೀತಿ ಸಾವಿರ ಪಾಲು ಮೇಲು. ಈ ರೀತಿಯ ಭಿನ್ನ ದನಿಗಳಿಂದ ಸುಕನ್ಯಾರವರ ಕವನಗಳು ವಿಶಿಷ್ಟವೆನಿಸುತ್ತವೆ.

**ದು ಸರಸ್ವತಿ :-** ಜನನ ೪ ಏಪ್ರಿಲ್, ೧೯೬೩. ಸ್ಥಳ ಬೆಂಗಳೂರು. ಇವರ ಕವನ ಸಂಕಲನಗಳು ಹೆಣದರ ಜೇಡನಂತೆ (೧೯೯೭), ಜೀವಸಂಪಿಗೆ (೨೦೦೬). ಸ್ತ್ರೀಯರ ಬದುಕಿನ ನೋವು-ನಲಿವುಗಳಿಗೆ ಇವರ ಕವನಗಳು ದನಿಯಾಗಿವೆ. 'ಹೆಣದರ ಜೇಡನಂತೆ' ಕವನದಲ್ಲಿ

ಹೆಣದರ ಜೇಡನಂತೆ

ಹೀಗೆ ಕಿತ್ತರೆ ಹಾಗೆ

ಸರಸರ ಹೆಣೆಯಬೇಕು.[2]

ಹೆಣ್ಣಿನ ಅಂತಃ ಸಾಮರ್ಥ್ಯ ಎಷ್ಟು ಗಟ್ಟಿಯಾಗಿರಬೇಕೆಂದರೆ ಎಷ್ಟೇ ಅಡೆತಡೆಗಳು ಎದುರಾದರೂ ಮತ್ತೆ ಮತ್ತೆ ಪ್ರಯತ್ನಿಸುವ, ಇನ್ನೊಂದು ಸವಾಲಿಗೆ ಸಿದ್ಧವಾಗುವ ಗಟ್ಟಿತನ ಇರಬೇಕು. ಇಲ್ಲದಿದ್ದಲ್ಲಿ ವ್ಯವಸ್ಥೆಯ ಕರಾಳತೆ ಹೆಣ್ಣನ್ನು ತನ್ನ ದಾಳವನ್ನಾಗಿ ಮಾಡಿಕೊಂಡುಬಿಡುತ್ತದೆ.

'ಉರಿದು'

ಸತಿಯಾದ ರೂಪಳನ್ನು

ಚರಿತ್ರೆಗೆ ಸೇರಿಸಲೆ?

---

೧) ಪೂರ್ವೋಕ್ತ - ೧೪೧

೨) ದು ಸರಸ್ವತಿ : ಹೆಣದರ ಜೇಡನಂತೆ -೩

ಒಲೆಯ ಉರಿಗೆ

'ಜಿನುಗಿ' ಹೋದ

ಅವ್ವಂದಿರ ಕುರಿತು

ಕವನ ಕಟ್ಟಿ ಹಾಡಲ? [೧]

ಅಡುಗೆ ಮನೆಯ ಒಲೆಯಲ್ಲಿ ದಿನನಿತ್ಯ ಬೇಯುವ, ಅಮಾನುಷ ಸತಿ ಪದ್ಧತಿಯಲ್ಲಿ ನರಳಿದ, ಸಜೀವ ದಹನವಾದ ರೂಪ್ ಕನ್ವರ್‌ಳಂಥ ಅದೆಷ್ಟೋ ಹೆಣ್ಣು ಜೀವಗಳ ನರಳಿದ ಸದ್ದು ಇಡೀ ಚರಿತ್ರೆಯ ಪುಟಪುಟಗಳಲ್ಲಿ ಇದ್ದರೂ ಅದು ಈ ಸಮಾಜಕ್ಕೆ ನಗಣ್ಯ. ಇಂಥ ಚರಿತ್ರೆಯ ಕ್ರೂರತೆಯನ್ನು 'ಏನ ದಾಖಲಿಸಲಿ?' ಎಂದು ಕೇಳುವ ಕವಯಿತ್ರಿಯ ಪ್ರಶ್ನೆಯಲ್ಲಿ ಅನೇಕ ಶತಶತಮಾನಗಳಿಂದ ನರಳಿದ ಹೆಣ್ಣಿನ ಧ್ವನಿಯಿದೆ.

**ಡಿ ಬಿ ರಜಿಯಾ :-** ಇವರು ಬಳ್ಳಾರಿ ಹತ್ತಿರದ ಹಿರೇನಾಳ್ ಎಂಬಲ್ಲಿ ಜನಿಸಿದರು. ಇವರ ಕವನ ಸಂಕಲನಗಳು ಛಾಯ (೧೯೯೧), ಕಳೆದು ಹೋಗುತ್ತೇವೆ. ಇವರ ಕವನಗಳಲ್ಲಿ ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆಗಳನ್ನು ಕಾಣಬಹುದು.

ಇವರೆ ನಮ್ಮವರು

ನಮ್ಮ ಕಾಯುವವರು

ಬೇಲಿಯಾಗಿ ಸುತ್ತ ನಿಂತು

ನಮ್ಮ ಮೇಯುವವರು. [೨]

ರಕ್ಷಣೆಯ ನೆಪದಲ್ಲಿ ಹೆಣ್ಣನ್ನು ಬಂಧಿಯಾಗಿಸಿ, ದಾಸ್ಯದಲ್ಲಿಟ್ಟ ಈ ಪುರುಷ ಪ್ರಧಾನ ವ್ಯವಸ್ಥೆ ಕಾಯುವ ನೆಪದಲ್ಲಿ ನುಂಗುವ ದುಷ್ಕಾರ್ಯ ಮಾಡುತ್ತಿದೆ. ಕಾಯುವಂತೆ ನಟಿಸಿ ಕೊರಳಿಗೆ ನೇಣು ಹಾಕುವ, ಪ್ರೀತಿಯ ನೆಪದಲ್ಲೇ ಬೇಡಿ ತೊಡಿಸುವ ವಿಶ್ವಾಸಘಾತಕರು.

---

೧) ಪೂರ್ವೋಕ್ತ - ೧

೨) ಡಿ ಬಿ ರಜಿಯಾ : ರಜಿಯಾ ಅವರ ಕವಿತೆಗಳು -೧೧

ಬೇರು ಬಿಟ್ಟ

ಶತಶತಮಾನದ

ಪುರುಷಾಧಿಪತ್ಯದ

ಬಿಳಿಲು ಬೊಡ್ಡೆಗಳ

ಅಲುಗಾಡಿಸದೆ

ನಿಟ್ಟುಸಿರಿಡುತ್ತಾ

ಅದರ ನೆರಳಲ್ಲೆ ಕೂತು [1]

ಹೆಣ್ಣಿನ ಜೀವನ 'ಮುಖವಾಡ'ದ ಹಿಂದೆ ಅಡಗಿಹೋಗಿದೆ. ಒಳಗೆ ಅಪಾರ ನೋವು ತುಂಬಿದ್ದರೂ ಹೊರಗೆ ತೃಪ್ತಿಯ ಮುಖವಾಡ ಅವಳಿಗೆ ಮಾಮೂಲು. ಪುರುಷಾಧೀನೆಯಾಗಿ, ಶತಶತಮಾನಗಳಿಂದ ಮೌಲ್ಯಗಳ ಹೆಸರಿನಲ್ಲಿ ಶೋಷಣೆ ಅನುಭವಿಸುತ್ತಾ, ಪ್ರತಿಭಟಿಸಲಾಗದೆ ಕೇವಲ ನಿಟ್ಟುಸಿರೇ ಅದಕ್ಕೆ ಪ್ರತಿಕ್ರಿಯೆ ಎಂಬಂತೆ ಕಾಲ ಕಳೆದ ಹೆಣ್ಣುಮಕ್ಕಳ ನೋವು ಈ ಕವನದಲ್ಲಿ ಪ್ರತಿಧ್ವನಿಸಿದೆ.

**ಧರಣಿ ಮಾಲಗತ್ತಿ :-** ಇವರು ಆಧುನಿಕ ಕವಯಿತ್ರಿ. ಇವರ ಕವನ ಸಂಕಲನ ಬ್ರೆಡ್‌ಜಾಮ್. ಇದು ಸ್ತ್ರೀ ಸಂವೇದನೆಯಿಂದ ಕೂಡಿದೆ. ಹೇಳಬೇಕಾದುದನ್ನು ನೇರವಾಗಿ, ದಿಟ್ಟವಾಗಿ ಹೇಳುವ ಧಾಟಿ ಇವರದು. 'ನಾವು ರಾಣಿಯರು' ಕವನವು ಹೆಣ್ಣಿನ ಬದುಕನ್ನು ಚಿತ್ರಿಸುತ್ತದೆ.

ನಾನು ರಾಣಿ

ಕೊರೆದಿಟ್ಟ ಬರಗಿನ ಚಚ್ಚೌಕದ ಹೊರಗೆ

ಅಡಿಯಿಡಲು ಹಕ್ಕಿರದ ಪ್ರಾಣಿ

ಒಂದು ಹೆಜ್ಜೆ ಮುಂದೆ

---

೧) ಪೂರ್ವೋಕ್ತ - ೧೪

ಒಂದು ಹೆಜ್ಜೆಹಿಂದೆ

ಆ ಪಕ್ಕ, ಈ ಪಕ್ಕಕ್ಕೇ ಮುಕ್ತಾಯ [1]

ರಾಣಿ ಎಂಬುದು ಕೇವಲ 'ಪಟ್ಟ' ಮಾತ್ರ. ಅವಳು ಚಲಿಸಬೇಕಾದ ಹಾದಿ ಮೊದಲೇ ನಿಶ್ಚಿತ, ಸ್ವತಂತ್ರ ಚಲನೆ ಅವಳಿಗೆ ಸಾಧ್ಯವೇ ಇಲ್ಲ. ಇದು ಒಬ್ಬ 'ರಾಣಿ'ಯ ಕಥೆಯಲ್ಲ.

ವಿರೋಧ ಪಕ್ಷದ ರಾಣಿಯರದೂ

ಇದೇ ಹಾಡು, ಇದೇ ಸೊಲ್ಲು

ಆದರೂ

ನಾವು ರಾಣಿಯರು [2]

ಪುರುಷ ನಿರ್ಮಿತ ಮೌಲ್ಯದೊಳಗೆ ಹೆಣ್ಣು ಬಂಧಿಯಾಗಿರುವ ಪರಿ ಇದು. ಆದರೂ ಹೆಣ್ಣು ಸಂಪೂರ್ಣವಾಗಿ ಅಧೀನಳಲ್ಲ. ಅವಳೂ ಸ್ವತಂತ್ರವಾಗಿ ಆಲೋಚಿಸಬಲ್ಲಳು. ಎಲ್ಲಿ ಬಂಧನದ ಬಿಗಿ ಇರುತ್ತದೋ ಅಲ್ಲಿ ಸ್ವಾತಂತ್ರ್ಯದ, ಪ್ರತಿರೋಧದ ತೀವ್ರತೆ ಇರುತ್ತದೆ.

**ಮಮತಾ ಜಿ ಸಾಗರ :-** ಇತ್ತೀಚಿನ ಕವಯಿತ್ರಿಯರಲ್ಲಿ ಪ್ರಮುಖವಾದ ಹಾಗೂ ವಿಶಿಷ್ಟವಾದ ಕವಯಿತ್ರಿ ಈಕೆ. ಇವರ ಕವನ ಸಂಕಲನಗಳು ಕಾಡ ನವಿಲಿನ ಹೆಜ್ಜೆ (೧೯೯೨), ನದಿಯ ನೀರಿನ ತೇವ (೧೯೯೮), ಹೀಗೆ ಹಾಳೆಯ ಮೇಲೆ ಹಾಡು (೨೦೦೭). ಇವರ ನದಿಯ ನೀರಿನ ತೇವ ವಿಶಿಷ್ಟ ಪದ ಪ್ರಯೋಗ, ಭಾಷಾ ಬಳಕೆ, ರೇಖಾ ಚಿತ್ರಗಳ ಬಳಕೆಯ ಮೂಲಕ ಸಹೃದಯರಲ್ಲಿ ತೀವ್ರ ಪರಿಣಾಮ ಬೀರುತ್ತದೆ. ಈ ಮೂಲಕ ವಿಶಿಷ್ಟ ಪ್ರಯೋಗ ಶೀಲತೆಯಿಂದ ವಿಭಿನ್ನ ಕವಯಿತ್ರಿ ಎನಿಸಿದ್ದಾರೆ. ಸ್ತ್ರೀ ಸಂವೇದನೆ ಇವರ ಕವನಗಳಲ್ಲಿ ಮುಖ್ಯವಾಗಿ ಕಂಡು ಬರುತ್ತದೆ.

---

೧) ಧರಣಿ ಮಾಲಗತ್ತಿ : ಬ್ರೆಡ್‌ಜಾಮ್ -೧೭

೨) ಪೂರ್ವೋಕ್ತ - ೧೮

ಅಗೋ ಆಕಾಶ, ಅಲ್ಲಿ ಮೇಲೆ।

ಅದರಡಿಗೆ ಭೂಮಿ,

ನೀನು ಭೂಮಿ ನಾನು ಆಕಾಶ [೧]

ಪುರುಷ ಪ್ರಧಾನ ಮೌಲ್ಯಗಳು ಕೇವಲ ಆಚರಣೆಯಲ್ಲಿ ಮಾತ್ರವಲ್ಲದೆ ಭಾಷೆಯಲ್ಲೂ ಸೇರಿ ಹೋಗಿವೆ. ಆಡುವ ಭಾಷೆಯೂ ಪುರುಷ ನಿರ್ಮಿತ. ಅಲ್ಲಿ ಸ್ತ್ರೀ ನಗಣ್ಯ. ಮೇಲಿರುವ ಪುರುಷನಿಗೆ ಕೆಳಗಿರುವ ಸ್ತ್ರೀ ಅಧೀನ ಎಂಬುದನ್ನು ಆಕಾಶ, ಭೂಮಿ ಎಂಬ ಪ್ರತಿಮೆಗಳ ಮೂಲಕ ತೋರಿಸಿ ನಿಜವೆಂದು ನಂಬಿಸುವ ಹುನ್ನಾರವನ್ನಿಲ್ಲಿ ಕಾಣಬಹುದು. ಗಂಡು-ಹೆಣ್ಣಿನ ನಡುವಿನ ಒಲವು, ಸೆಳೆತ ಪ್ರಕೃತಿ ಸಹಜವಾದದ್ದು, ಇದನ್ನು 'ಮತ್ತೆ ಮಳೆ' ಕವನವು ನವಿರಾಗಿ ಚಿತ್ರಿಸುತ್ತದೆ.

ನನ್ನ ಬಿಸಿಯುಸಿರು

ಅವನ ಮೈ ಮೇಲಾಡಿ

ಅವನ ನಗು ನನ್ನ ತುಟಿ ಮೇಲೆ

ಕಾಯಿತ್ತದೆ ಮಳೆ

ಹೊರಗೆ,

ನಾವು ಒಳಗೆ,

ನೆನೆಯುತ್ತೇವೆ. . .

ಮಳೆಯಾಗಿ ಅವನು ನನ್ನೊಳಗೆ

ನಾನು ಮಳೆ ಅವನೊಳಗೆ

ಮಳೆ ಒಳಗೆ ಹೊರಗೆ। [೨]

---

೧) ಮಮತಾ ಜಿ ಸಾಗರ : ನದಿಯ ನೀರಿನ ತೇವ - ೩೧

೨) ಮಮತಾ ಜಿ ಸಾಗರ : ಹೀಗೆ ಹಾಳೆಯ ಮೇಲೆ ಹಾಡು - ೪೩

ಮಹಿಳೆಯರು ಪ್ರೀತಿ, ಪ್ರೇಮದಂತಹ ವಿಚಾರಗಳನ್ನು, ಅಂತರಂಗದ ಭಾವನೆಗಳನ್ನು ಇಷ್ಟು ಮುಕ್ತವಾಗಿ ತೆರೆದಿಡುವ ಬಗೆ ಅಪೂರ್ವವಾದುದು. ಈ ವಿಷಯಗಳ ಬಗ್ಗೆ ಆಲೋಚಿಸುವುದೂ ಹೆಣ್ಣಿಗೆ ಅಪರಾಧವೆನಿಸಿದ ಪರಿಸ್ಥಿತಿಯಿಂದ ಇಂದು ಹೆಣ್ಣು ಮುಕ್ತವಾಗಿ ಅಭಿವ್ಯಕ್ತಿಸುವ ಹಂತಕ್ಕೆ ಬೆಳೆದಿರುವುದು ಸಂತೋಷಕರ, ಆರೋಗ್ಯಕರ ಬೆಳವಣಿಗೆಯಾಗಿದೆ.

ಹೀಗೆ ಕನ್ನಡ ಕಾವ್ಯಲೋಕದಲ್ಲಿ ಹಲವಾರು ಕವಯಿತ್ರಿಯರು ತಮ್ಮ ವಿಶಿಷ್ಟ ಚಿಂತನಾ ಕ್ರಮಗಳಿಂದ ತಮ್ಮ ಅನುಭವ, ವಿಚಾರಗಳನ್ನು ಕಾವ್ಯವಾಗಿಸಿದ್ದಾರೆ. ಭಾಗ್ಯ, ಮಲ್ಲಿಕಾ ಘಂಟಿ, ಎಚ್ ಎನ್ ಆರತಿ, ಶಶಿಕಲಾ ವಸ್ತ್ರದ, ಡಾ. ಪದ್ಮ ಶೇಖರ್, ರೂಪ ಹಾಸನ, ಜ್ಯೋತಿ ಗುರುಪ್ರಸಾದ್, ಅಕ್ಷತಾ ಕೆ, ಹೇಮಾ ಬನ್ನಂಜೆ ಮುಂತಾದವರು ಕನ್ನಡ ಕಾವ್ಯ ಲೋಕದಲ್ಲಿ ತಮ್ಮ ವಿಶಿಷ್ಟ ಸಂವೇದನೆಗಳಿಂದ ಹೆಸರು ಮಾಡಿದ್ದಾರೆ. ಕಾವ್ಯ ಎನ್ನುವುದು ವಿಶಿಷ್ಟ ಸಂವೇದನಾ ರೂಪವಾಗಿದ್ದು ವೈಯಕ್ತಿಕ ಆಲೋಚನೆ, ಅಭೀವ್ಯಕ್ತಿಗಳಿಗೆ ಸೂಕ್ತ ವೇದಿಕೆಯಾಗಿದೆ. ಆರಂಭದಿಂದ ಇಂದಿನವರೆಗಿನ ಮಹಿಳಾ ಕಾವ್ಯವನ್ನು ಗಮನಿಸುತ್ತಾ ಬಂದಂತೆ ಮಹಿಳೆಯರ ಆಲೋಚನೆಗಳಲ್ಲಿ ಆದ ಬದಲಾವಣೆಯನ್ನು ಗುರ್ತಿಸಬಹುದು. ಆರಂಭದಲ್ಲಿ ಪುರುಷ ಪ್ರಧಾನ ಮೌಲ್ಯಗಳಿಗೇ ಕಟ್ಟು ಬಿದ್ದು, ಅದನ್ನೇ ಒಪ್ಪಿ ಬದುಕುತ್ತಿದ್ದ ಸ್ತ್ರೀಯರು ಇಂದು ತಮ್ಮ ಸ್ವತಂತ್ರ ಅಸ್ತಿತ್ವಕ್ಕಾಗಿ ಹೋರಾಡುವ, ಅದಕ್ಕೆ ಧಕ್ಕೆ ತರುವ ಎಲ್ಲ ವಿಚಾರಗಳ ವಿರುದ್ಧ ಪ್ರತಿಭಟಿಸುವ ಧೈರ್ಯ ತಾಳಿದ್ದಾರೆನ್ನುವುದು ಸಂತೋಷದ ಸಂಗತಿ. ಪಾರಂಪರಿಕ ಸಂಗತಿಗಳನ್ನು ವೈಚಾರಿಕ ನೆಲೆಯಲ್ಲಿಟ್ಟು ಚರ್ಚಿಸುವ, ಚಿಂತನಗೀಡು ಮಾಡುವ ದೃಢತೆ ಪ್ರಶಂಸನಾರ್ಹ.

ಇಂದಿನ ಮಹಿಳಾ ಕಾವ್ಯದ ವಸ್ತುಗಳಲ್ಲಿ ಕೂಡ ಭಿನ್ನತೆ ಕಂಡು ಬರುತ್ತಿದೆ. ನಮ್ಮ ವಿಚಾರಗಳು ಬದಲಾದಂತೆ ನಮ್ಮ ಆಲೋಚನಾ ಕ್ರಮ ಹಾಗೂ ಅಭಿವ್ಯಕ್ತಿ ಕ್ರಮದಲ್ಲಿ ಸಾಕಷ್ಟು ಪರಿಣಾಮವು ಕಾವ್ಯ, ಅದರ ವಸ್ತು, ಅಭಿವ್ಯಕ್ತಿ ಕ್ರಮದ ಮೇಲೂ ಆಗಿ ಮಹಿಳಾ ಕಾವ್ಯಗಳನ್ನು ಸದೃಢ ಹಾಗೂ ಪರಿಪಕ್ವಗೊಳಿಸುತ್ತಿರುವು ಅತ್ಯಂತ ಆರೋಗ್ಯಕರ ಬೆಳವಣಿಗೆಯಗಿದೆ.

# ಅಧ್ಯಾಯ – ೨

## ಮಹಿಳಾ ಕಾವ್ಯಗಳಲ್ಲಿ ಪುರುಷನ ಅಸ್ತಿತ್ವದ ವಿವಿಧ ನೆಲೆಗಳು

ಆಧುನಿಕ ಕನ್ನಡ ಮಹಿಳಾ ಕಾವ್ಯಗಳಲ್ಲಿ ಮುಖ್ಯವಾಗಿ ಕಾಣುವ ಅಂಶಗಳಲ್ಲಿ ಅಸ್ಮಿತೆಯ ಹುಡುಕಾಟವು ಒಂದಾಗಿದೆ. ಹಲವು ಶತಮಾನಗಳಿಂದಲೂ ಪುರುಷಾಧಿಪತ್ಯದ ತುಳಿತಕ್ಕೆ ಒಳಪಟ್ಟ ಮಹಿಳಾ ವರ್ಗವು ತಮ್ಮ ಅಸ್ತಿತ್ವವನ್ನೇ ಮರೆತಿದ್ದವು ಹಾಗೂ ಅದು ಮರೆಯಲ್ಪಡುವಂತೆ ಮಾಡಲ್ಪಟ್ಟಿತ್ತು. ಆಧುನಿಕ ಕಾಲದ ಹಲವು ಬದಲಾವಣೆಗಳ ಕಾರಣದಿಂದ ಎಚ್ಚೆತ್ತ ಮಹಿಳಾ ವರ್ಗ ತನ್ನ ಅಸ್ಮಿತೆಯ ಬಗೆಗೆ ದನಿ ಎತ್ತಲಾರಂಭಿಸಿತು. ಮಹಿಳಾ ಕಾವ್ಯವು ಈ ದನಿಗೆ ತನ್ಮೂಲಕ ಹಾದಿಯನ್ನು ಮಾಡಿಕೊಟ್ಟಿತು. ಮಹಿಳೆಯ ಅಸ್ಮಿತೆಯ ಪ್ರಶ್ನೆಯ ಹಿಂದೆ ಪುರುಷ ಅಡಗಿದ್ದಾನೆ. ಕಾರಣ ಅವನಿಂದಲೇ ಈ ಎಲ್ಲ ಅಸಮಾನತೆ, ಶೋಷಣೆ ಮತ್ತು ಅನ್ಯಾಯ. ಹೀಗಾಗಿ ಈ ಪುರುಷನ ಚಿತ್ರಣ, ಅವನ ಬದುಕು, ಮಹಿಳೆಯ ಬದುಕಿನಲ್ಲಿ ಅವನ ಅವಶ್ಯಕತೆ ಏನು ಎಂಬೆಲ್ಲಾ ಅಂಶಗಳು ಮಹಿಳಾ ಕಾವ್ಯಗಳಲ್ಲಿ ಚಿತ್ರಿತಗೊಂಡಿರುವುದನ್ನು ಇಂದು ಗಮನಿಸಬೇಕಾದ ಅವಶ್ಯಕತೆ ಇದೆ.

ಇದುವರೆಗೂ ಪುರುಷ ಪ್ರಧಾನ ಮೌಲ್ಯಗಳಡಿಯಲ್ಲಿ ತಮ್ಮ ಬದುಕಿನ ಸೊಬಗನ್ನು ಸವಿಯುವ ಅವಕಾಶವನ್ನೇ ಕಳೆದುಕೊಂಡಿದ್ದ ಮಹಿಳಾ ವರ್ಗ ಇಂದು ಅದರ ವಿರುದ್ಧ ದನಿ ಎತ್ತಿ ಹೋರಾಡುತ್ತಿರುವುದು ಅತ್ಯಂತ ಸಂತಸದ ಸಂಗತಿ. ಆದರೂ ಪರಸ್ಪರ ವಿರುದ್ಧವಾಗಿ ಹೋರಾಟ ಮಾಡಿದರೂ ಇಬ್ಬರಿಗೂ ಇನ್ನೊಬ್ಬರ ಅನಿವಾರ್ಯತೆ ಖಂಡಿತ ಅವಶ್ಯಕ. ಇದು ಪ್ರಕೃತಿ ನಿಯಮವೂ ಹೌದು. ಪ್ರತಿಯೊಂದು ಜೀವಿಯ ಬದುಕಿಗೆಲ್ಲಾ ಮತ್ತೊಂದು ಜೀವಿಯ ಸಾಮಿಪ್ಯ ತೀರಾ ಅಗತ್ಯ. ಆದರೆ ಈ ಅನಿವಾರ್ಯತೆಯೇ ಇನ್ನೊಂದು ಜೀವಿಯ ಅಧೀನತೆಗೆ ಕಾರಣವಾದದ್ದು ವಿಪರ್ಯಾಸವೇ ಸರಿ. ಈ ನಿಟ್ಟಿನಲ್ಲಿ ಮಹಿಳೆಯ ಬದುಕಿನಲ್ಲಿ ಪುರುಷನ ಪಾತ್ರ ಏನು, ಅವನ ಅಸ್ತಿತ್ವದ ಅವಶ್ಯಕತೆ ಏನು ಎಂಬುದನ್ನು ಚಿಂತಿಸುವುದು ಅಗತ್ಯ. ಆಧುನಿಕ ಯುಗದಲ್ಲಿ ಮಹಿಳೆಯರು ಸಂಪೂರ್ಣವಾಗಿ ಪುರುಷಾಧೀನರಾಗಿ ಬಾಳಬೇಕಾದ ಅಗತ್ಯವಿಲ್ಲ. ಸ್ವತಂತ್ರವಾಗಿ ಬದುಕು ನಡೆಸಲು ಅವರು ಶಕ್ತರಾಗಿದ್ದಾರೆ. ಆದರೆ ಸ್ವತಂತ್ರವಾಗಿ ಬದುಕುವ ಹಂತದಲ್ಲಿ ಪರಸ್ಪರ ಅವಶ್ಯಕತೆಗಳನ್ನು ಕಳೆದುಕೊಳ್ಳುವ ಅಗತ್ಯವಿಲ್ಲ. ಅದು ಬದುಕಿನ ಪರಿಪೂರ್ಣತೆಯೂ ಅಲ್ಲ. ಪರಸ್ಪರ ಒಟ್ಟಿಗೆ ಬದುಕುತ್ತಾ, ಯಾರು ಯಾರಿಗೂ ಅಧೀನರಾಗದೆ ಸ್ವತಂತ್ರವಾಗಿ ಜೀವಿಸುವ ಸಾಮರ್ಥ್ಯ ಇರಬೇಕಾದುದು ಅತ್ಯಂತ ಅವಶ್ಯಕ. ಆರ್ಥಿಕವಾಗಿ ಇಬ್ಬರೂ ಎಷ್ಟೇ ಸಬಲರಾದರೂ ಮಾನಸಿಕ ಅವಶ್ಯಕತೆಗಳಿಗೆ ಪರಸ್ಪರ ಸಾಂಗತ್ಯ ಇಬ್ಬರಿಗೂ ಅವಶ್ಯಕ. ಈ ನಿಟ್ಟಿನಲ್ಲಿ ಮಹಿಳೆಯರ ಬದುಕಿನಲ್ಲಿ ಪುರುಷರ ಅವಶ್ಯಕತೆ, ಅವರ ಅಸ್ತಿತ್ವ ಎಷ್ಟು ಪ್ರಮುಖ ಎಂದು ಅರಿಯಬೇಕಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಮಹಿಳಾ ಕಾವ್ಯಗಳಲ್ಲಿ ಮಹಿಳೆಯರು ಪುರುಷರಿಗೆ ನೀಡಿರುವ ಆದ್ಯತೆ ಎಷ್ಟು? ಅವರ ಅವಶ್ಯಕತೆ ಎಂತದ್ದು? ಮುಖ್ಯವಾಗಿ ಅವರ ಬದುಕಿನಲ್ಲಿ ಪುರುಷರ ಅಸ್ತಿತ್ವ ಎಷ್ಟರ ಮಟ್ಟಿಗೆ ಅಗತ್ಯ? ಇದರ ವಿವಿಧ ನೆಲೆಗಳಾವುವು? ಎಂಬುದನ್ನು ಕುರಿತು ಚಿಂತಿಸಲಾಗಿದೆ.

ಮಹಿಳೆಯರ ಬದುಕಿನಲ್ಲಿ ಪುರುಷನ ಅಸ್ತಿತ್ವ, ಅಗತ್ಯ, ಅದರ ನೆಲೆಗಳ ಕುರಿತು ಹಲವಾರು ಕವಿತೆಗಳು ಮೂಡಿಬಂದಿವೆ. ಸಂಗಾತಿಯಾಗಿ ಪುರುಷ ಮಹಿಳೆಯ ಜೀವನದಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತಾನೆ. ಅವನ ಸಾಮಿಪ್ಯ ಹೆಣ್ಣಿಗೆ ಅತ್ಯಂತ ಅವಶ್ಯಕ. ಅವನ ಇರುವಿಕೆ, ನಲ್ಮೆಯ ಮಾತುಗಳು ಅವಳಲ್ಲಿ ಆಪ್ತತೆಯನ್ನುಂಟು ಮಾಡುತ್ತದೆ. ಇಂತಹ ಇನಿಯನಾಗಿ ಕಾಯುವ, ಪರಿತಪಿಸುವ, ಕಾತರಿಸುವ ಪರಿಯನ್ನು ಅಕ್ಕಮಹಾದೇವಿಯ ಕಾಲದಿಂದಲೂ ಕಾಣುತ್ತಾ ಬಂದಿದ್ದೇವೆ. ಆಧುನಿಕ ಮಹಿಳಾ ಕಾವ್ಯಗಳಲ್ಲೂ ಇದು ಗೋಚರಿಸುತ್ತದೆ. ತನ್ನ ಇನಿಯ ತನಗಾಗಿ ಬರುವನೆಂಬ ವಿಷಯವೇ ಅವಳಲ್ಲಿ ಅತ್ಯಂತ ಸಂಭ್ರಮವನ್ನುಂಟು ಮಾಡುವ ಸಂಗತಿಯಾಗಿರುತ್ತದೆ.

ನಿನ್ನ ಬರುವಿಕೆ ನನಗೆ ಬೆಳಕ ದೀಪಾವಳಿಯು

ನಿನ್ನೊಲವ ಸಿರಿತ್ನಲ ಬಳ್ಳಿಯೇನು

ಅನುರಾಗದೀ ದೀಪ ಆರದಿರುವೊಲು ಬಾಳಿ

ನಿನ್ನೆದೆಯ ಗುಡಿಯನ್ನು ಬೆಳಗಿಯೇನು [೧] (ಪ್ರೀತಿ ದೀಪಾವಳಿ)

ಪುರುಷನಿಲ್ಲಿ ಅವಳ ಬಾಳಿನ ಬೆಳಕಾಗಿ ಗೋಚರಿಸುವನು. ಅವರ ನಡುವಿನ ಅನುರಾಗವೇ ಅವಳ ಬದುಕಿನ ಸತ್ವವಾಗಿದೆ. ಅದರಲ್ಲೇ ಅವಳು ಸಂತೃಪ್ತಳು. ಇಂತಹವನು ಅವಳಿಗಾಗಿ ಬರುವನೆಂದು ಮಾತು ನೀಡಿದಾಗ ಅವನಿಗಾಗಿ ಆಕೆಯು ತನ್ನಿಡೀ ಬದುಕ ಪೂರ್ತಿ ಕಾಯಲು ಸಿದ್ಧಳಾಗುವ ಪರಿಯಂತೂ ಇಲ್ಲಿ ವಿಶಿಷ್ಟವೆನಿಸುತ್ತದೆ.

---

೧) ಛಾಯಾ ಭಗವತಿ : ಮುಟಾಣಿ ಕೆಂಪು ಶೂ - ೩೩

ಇನ್ನು ಮಾತನಾಡಲಾರೆ ನಾನು

ನಿಜವ ನಡೆದುಕೊಳ್ಳಲು

ಮೌನ ಸಾಕು

ನೀನು ಬರಲಿ ಎಂದು

ಕಣ್ಣರಳಿಸಿರುವೆ

ನಿನ್ನ ಕಾಯುವೆ

ಕಣ್ಣು ಮುಚ್ಚುವವರೆಗೂ [೧] (ಸ್ವಾಗತ)

ಹೀಗೆ ಕಾಯುವ ಅವಳಲ್ಲಿ ಅವನು ಬಾರದಿರುವಾಗ ಉಂಟಾಗುವ ನೋವು, ಚಡಪಡಿಕೆ, ಬೇಸರ ಅಗಾಧವಾದುದು. ಇಲ್ಲಿ ಅವನು ಅವಳಿಗೆ ತೀರಾ ಅಗತ್ಯ. ಅವನ ಅವಶ್ಯಕತೆ ಇವಳಿಗೆ ಅಪಾರ. ಆದರೆ ಅವನು ಮಾತಿಗೆ ತಪ್ಪುವವನು, ಇವಳ ನಿಟ್ಟುಸಿರಿಗೆ ಕಾರಣನು.

ಚಂಡಮಾರುತವಾಯಿತು ನಿಟ್ಟುಸಿರು

ನಿನ್ನ ಸೆಳೆದು ತರಲಿಲ್ಲ,

ನೀನು ಬರಲಿಲ್ಲ. [೨] (ಯಾಕೆ ಬರಲಿಲ್ಲ)

ಆದರೂ ಅವನ ಮೇಲಿನ ಪ್ರೀತಿ, ನಂಬಿಕೆ ಕಳೆದುಕೊಳ್ಳದ ಹೆಣ್ಣು ಅವನ ಬರುವಿಕೆಗಾಗಿ ಕೊನೆವರೆಗೂ ಭರವಸೆಯಿಟ್ಟು ಕಾಯುತ್ತಾಳೆ.

---

೧) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ - ೨೬

೨) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂವುಗಳು --- ೨೫

ಅವು ಯಾವುವೂ ಈಗ ನನ್ನನ್ನು ನಂಬುವುದಿಲ್ಲ

ನಾನಿನ್ನೂ ನಿನ್ನನ್ನು ನಂಬುವುದು ಬಿಟ್ಟಿಲ್ಲ. [೧] [ (ಅಪ) ನಂಬಿಕೆ]

ಗಂಡಿಗೆ ಕೆಲವೊಮ್ಮೆ ಹೆಣ್ಣಿನ ಒಲವಿಗಿಂತ ಅವನ ಕೆಲಸ ಕಾರ್ಯಗಳೇ ಮುಖ್ಯವಾಗಿ ಅವಳಿಂದ ದೂರವಿದ್ದಾಗ ಅವಳು ಅವನ ಸಾಮಿಪ್ಯವನ್ನು ಬಯಸುವ, ಹಂಬಲಿಸುವ, ಕಾತರಿಸುವ, ಅವನ ಇರುವಿಕೆಗಾಗಿ ಹಾತೊರೆಯುವವಳಾಗುತ್ತಾಳೆ.

ಇದರೊಳಗಿರುವುದೀಗ

ಬರೀ ನಿನ್ನ ಹೆಸರ ಅಕ್ಷರಗಳಲ್ಲಿ

ನನ್ನ ಪಾಲಿಗೆ

ನಿನ್ನ ಇರುವಿಕೆಯನ್ನು ಪ್ರತಿಫಲಿಸುವ

ಪ್ರಾಣದ ಕೊಂಡಿ [೨] (ರಶೀತಿ)

ಈ ಸಾಲುಗಳಲ್ಲಿ ಪುರುಷನ ಅಸ್ತಿತ್ವದ ಅಗತ್ಯದ ತೀವ್ರ ಸ್ವರೂಪವಿದೆ. ಸಣ್ಣ ಚೀಟಿಯಲ್ಲಿ ಅವನ 'ಇರುವಿಕೆ'ಯನ್ನು ಅನುಭವಿಸುವ ಅವಳ ಮನಸ್ಥಿತಿ ಇಲ್ಲಿ ಗೋಚರಿಸುತ್ತದೆ. ಅವನಿಗಾಗಿ ಇಷ್ಟೆಲ್ಲಾ ಹಾತೊರೆಯುವ ಅವಳಿಗೆ ಅವನು ತಾನಾಗೇ ಇವಳನ್ನು ಕಾಣಲು ಬಂದರೆ ಆಗುವ ಸಂತೋಷ, ಸಂಭ್ರಮಕ್ಕೆ ಮಿಗಿಲೇ ಇಲ್ಲವಾಗುತ್ತದೆ.

ನೀನು ನನ್ನ ನೋಡಲು ಬಯಸಿ ಬಂದರೆ

ನಾನು ನಿನಗೆ ಕಾಣುತ್ತೇನೆ

---

೧) ವೀಣಾ ಬನ್ನಂಜೆ : ಅಕ್ಕನ ಹಾದಿ -೨೫

೨) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ -೨೨

ನಿನ್ನ ಪ್ರೀತಿಯ ಸ್ವರೂಪವಾಗಿ

ನೀನು ಇಷ್ಟಪಟ್ಟ ನನ್ನ ಕಣ್ಣು ಕಾಡಿಗೆಯ

ಋಜುವಾಗಿ.... ಹೀಗೆ,

ನಿನ್ನ ಪ್ರೀತಿ, ನನ್ನ ಭವಿಷ್ಯ [೧] (ಕಾಲನದ)

ಅವನ ಪ್ರೀತಿಯಲ್ಲಿ ಅವಳ ಭವಿಷ್ಯವೇ ಅಡಗಿದೆ. ಅದು ಅವರ ಬದುಕನ್ನು ನಿರ್ಧರಿಸುವ, ಮುನ್ನಡೆಸುವ ಚಾಲಕ ಶಕ್ತಿ. ಅವನ ಸಾಮಿಪ್ಯಕ್ಕಾಗಿ ಹಾತೊರೆಯುವ ಹೆಣ್ಣು ತನ್ನ ಇರುವು ಮತ್ತು ಅಳಿವಿನಲ್ಲೂ ಅವನ ಅಗತ್ಯತೆಯನ್ನು ಹಂಬಲಿಸುತ್ತಾಳೆ.

ನಿನ್ನ ಜೊತೆ ಬೇಕೇ ಬೇಕು

ಬದುಕಿನಲ್ಲೂ - ಸಾವಿನಲ್ಲೂ

ಬದುಕೆಂದರೆ ನಿನ್ನನಾ ಅರಿವ ಪರಿ

ಸಾವೆಂದರೆ ನಮ್ಮದಿಯಲ್ಲಿ ಕಣ್ಮುಚ್ಚುವಿಕೆ. [೨] (ಒಂದು ದೀರ್ಘ ಪ್ರೇಮ ಪತ್ರ)

ಗಂಡಿಲ್ಲದೆ, ಅವನ ಪ್ರೀತಿ ಇಲ್ಲದೆ ಹೆಣ್ಣು ಬಾಳುವುದು ಅತ್ಯಂತ ಕಷ್ಟಕರ. ಇದು ಗಂಡಿಗೂ ಅನ್ವಯಿಸುತ್ತದೆ. ಪರಸ್ಪರ ಒಬ್ಬರು ಇನ್ನೊಬ್ಬರಿಗಾಗಿ ನಡೆಸುವ ಜೀವನ ಸಾರ್ಥಕತೆಯನ್ನು ಪಡೆಯುವ ಮೂಲಕ ಇಲ್ಲಿ ಇಬ್ಬರ ಅಸ್ತಿತ್ವವೂ ಮತ್ತೊಬ್ಬರದನ್ನು ಅವಲಂಭಿಸಿದೆ.

---

೧) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ -೩೪

೨) ಪೂರ್ವೋಕ್ತ – ೧೧೦

ನಾನು ಅಳಿದು ಅಳಿದು

ಅವನೊಬ್ಬನೇ ಉಳಿಯಬೇಕು

ಅವನೊಳಗೆ ನಾನು ಬೆಳೆದರೆ ಸಾಕು।[೧] (ಧ್ಯಾನ)

ಗಂಡಿನೊಳಗೇ ಒಂದಾಗಿ ತನ್ನ ಅಸ್ತಿತ್ವವನ್ನು ಅವನೊಳಗೆ ಕರಗಿಸಿ, ಅವನೇ ಆಗಿ ಉಳಿದು, ಅವನೊಳಗೆ ಬೆಳೆಯಬೇಕೆಂದು ಹಂಬಲಿಸುವುದರಲ್ಲಿ ಅವನ ಅಸ್ತಿತ್ವದ ಜೊತೆಗೆ, ತನ್ನ ಅಸ್ತಿತ್ವದ ಬಗೆಗೂ ಸಂಪೂರ್ಣ ಎಚ್ಚರವಿರುವುದನ್ನು ಗಮನಿಸಬಹುದು. ವಿಶೇಷವೆಂದರೆ ಅವನೊಳಗೆ ಒಂದಾದ ಹೆಣ್ಣು ತನ್ನ ಚಲನೆಯನ್ನು ಸ್ಥಗಿತಗೊಳಿಸದೆ ಅವನಲ್ಲಿ ಬೆಳೆಯುವ ಬಯಕೆಯನ್ನು ಹೊಂದಿರುವುದು ಇಲ್ಲಿ ಗಮನಿಸಲೇ ಬೇಕಾದ ಅಂಶ.

ಹೀಗೆ ಒಬ್ಬರೊಳಗೊಬ್ಬರು ಒಂದಾಗುವ ಪ್ರಕ್ರಿಯೆಯಲ್ಲಿ ಗಂಡು-ಹೆಣ್ಣುಗಳಿಗೆ ಒಲವಿನ ಅವಶ್ಯಕತೆ ಹೆಚ್ಚಾಗಿ ಕಂಡುಬರುತ್ತದೆ. ಈ ಒಲವಿನಲ್ಲಿ ಕೊಂಚ ಏರುಪೇರಾದರೂ ಅವರ ನಡುವಿನ ಸಂಬಂಧ ಹದಗೆಡುತ್ತದೆ. ಪರಸ್ಪರ ಅವಶ್ಯಕತೆಗಳು ಇಲ್ಲವಾಗುತ್ತದೆ. ಗಂಡು ಪ್ರೀತಿಯ ವಿಷಯದಲ್ಲಿ ದೂರಾದಂತೆ ಹೆಣ್ಣಿಗೆ ಅವನ ಅಸ್ತಿತ್ವದ ಬಗೆಗೆ, ಅವನ ಅಗತ್ಯದ ಬಗೆಗೆ, ಒಟ್ಟು ಅವನ ಬಗೆಗೆ ಬೇಸರದ ಭಾವನೆ ಮೂಡಿಬಿಡುತ್ತದೆ. ಆತ ತನ್ನೊಡನೆ ಅನಿವಾರ್ಯವಾಗಿ ಬದುಕು ನಡೆಸುತ್ತಿದ್ದಾನೆ ಎನ್ನುವ ಸಂಗತಿ ತಿಳಿದರೆ, ಅವಳು ಅವನಿಂದ ದೂರಾಗಲೂ ಸಿದ್ಧವಾಗುತ್ತಾಳೆ.

ಹೊರಡು ಸಖನೇ ಹೋಗು

ಈ ಮನೆಯ ನಾಲ್ಕು ಗೋಡೆಗಳಾಚೆ

ಒಮ್ಮೆ ತೊಲಗಿ ಹೋಗು

ಮನಸ್ಸು ತುಡಿದರೆ

ಮಾತ್ರ ಮರಳು[೨] (ಆಸ್ಥೆ)

---

೧) ವೀಣಾ ಬನ್ನಂಜೆ : ಅಕ್ಕನ ಹಾದಿ -೩೨

೨) ಅಕ್ಷತಾ ಕೆ : ರೆಕ್ಕೆ ಬಿಚ್ಚಿ ಆಕಾಶ ನೆಚ್ಚಿ - ೬೧-೬೨

ಪ್ರೀತಿ ಇಲ್ಲದೆ ಕೇವಲ ಅನಿವಾರ್ಯದಿಂದ ಬದುಕು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಗಂಡನ ಅಗತ್ಯತೆಯ ಬಗೆಗೆ ಭಿನ್ನ ನಿಲುವು ತಾಳುವ ಅನಿವಾರ್ಯತೆ ಪತ್ನಿಗಿರುತ್ತದೆ. ಬದುಕಿನಲ್ಲಿ ಸಾಮರಸ್ಯ ಕಡಿಮೆಯಾದಂತೆ ಸಮಸ್ಯೆಗಳು ಹೆಚ್ಚಾಗುತ್ತವೆ, ಮನಸ್ಸುಗಳು ದೂರಾಗುತ್ತವೆ. ಹೀಗೆ ದೂರಾಗಿ ಬದುಕುವ ಅಥವಾ ಸ್ವತಂತ್ರವಾಗಿ ಜೀವಿಸುವ ಗಂಡು-ಹೆಣ್ಣುಗಳಲ್ಲಿ ಅವರವರ ಅಸ್ತಿತ್ವದ ಬಗ್ಗೆ ಭಿನ್ನ ನಿಲುವುಗಳಿರುತ್ತದೆ.

ನಾನೇಕೆ ಬಳ್ಳಿ, ನೀನೇಕೆ ಮರ
ನನ್ನ ಕಾಲ ಮೇಲಲ್ಲವೆ ನನ್ನ ನಿಲುವು
ನನ್ನ ಬಾಳಿಗೂ ಇಲ್ಲವೇ ನಿನ್ನಂತೆ ಛಲವು
ಆಸರೆಯ ಮಾತೆಲ್ಲಾ ಬೇಸರದ ನುಡಿಗಳೀಗ
ನಾನು ಬಳ್ಳಿಯೂ ಅಲ್ಲ ನೀನು ಮರವೂ ಅಲ್ಲ.
ಭೂಮಿಯಲ್ಲಿ ಹುಟ್ಟಿದ ಎರಡು ಗಿಡಗಳು ನಾವು
ಸುಖದ ಉದಯದಲ್ಲಿ ಹೂವರಳಿಸುತ್ತೇವೆ
ದುಃಖದ ಬೇಗೆಯಲ್ಲಿ ಬಸವಳಿಯುತ್ತೇವೆ.
ಗಾಳಿ ಬೀಸಿದಾಗ ಅಸ್ತಿತ್ವಕ್ಕಾಗಿ ಹೋರಾಡುತ್ತೇವೆ.[೧] (ಸಂಗಾತಿಗೆ)

ಹೀಗೆನ್ನುವಲ್ಲಿ ಅವರವರ ಅಸ್ತಿತ್ವದ ಬಗೆಗೆ ಸ್ಪಷ್ಟ ಅರಿವು ಇರುವುದು ಗೋಚರಿಸುತ್ತದೆ. ಅಸಮಾನ ನೆಲೆಯಲ್ಲಿ ಗಂಡಿಗೆ ಅಧೀನಳಾಗಿ ಬದುಕುತ್ತಿದ್ದ ಹೆಣ್ಣಿನಲ್ಲಿ ತನ್ನ ಅಸ್ತಿತ್ವ ಗಂಡಿನ ಅಸ್ತಿತ್ವದಷ್ಟೇ ಪ್ರಮುಖ, ಅವನಂತೆ ತಾನೂ ಸ್ವತಂತ್ರ ಜೀವಿ ಎಂಬ ಅರಿವು ಮೂಡಿ ಪಾರಂಪರಿಕ ಮೌಲ್ಯಗಳನ್ನು ಧಿಕ್ಕರಿಸಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿದ್ದಾಳೆ. ಜೊತೆಗೆ ಇಲ್ಲಿ ಪುರುಷನ ಅಸ್ತಿತ್ವವೇನು ಎಂಬ ಬಗೆಗೂ ಸ್ಪಷ್ಟ ನಿಲುವಿದೆ.

---

೧) ಎಂ ಎಸ್ ವೇದಾ : ಬಿಳಲುಗಳು - ೧೧

ಅವನೇ ಸರ್ವಸ್ವವಲ್ಲ. ಅವನು ತನ್ನಂತೆ ಒಂದು ಜೀವಿ ಅಷ್ಟೇ. ಸುಖ-ದುಃಖ ಇಬ್ಬರಿಗೂ ಸಮಾನ ಎಂಬ ಅರಿವು ಇಲ್ಲಿ ಗೋಚರಿಸುತ್ತದೆ. ಇದಕ್ಕೂ ಭಿನ್ನವಾದ ಆಲೋಚನೆಯೊಂದು ನಮಗೆ ಕಂಡುಬರುತ್ತದೆ.

ಎಲ್ಲ ಯಶಸ್ವಿ ಪುರುಷನ ಹಿಂದೆ

ಒಬ್ಬಳು ಮಹಿಳೆ

ಎಲ್ಲ ಯಶಸ್ವಿ ಮಹಿಳೆಯ ಹಿಂದೆ

ಒಬ್ಬ ಅತೃಪ್ತ ಪುರುಷ.[1] (ಸಂಗಾತ)

ಮಹಿಳೆಯ ಯಶಸ್ಸಿನ ಹಿಂದೆ ಸಾಮಾನ್ಯನಲ್ಲದ ಒಬ್ಬ ಅತೃಪ್ತ ಪುರುಷನಿರುವುದು ಅತ್ಯಂತ ಪ್ರಮುಖವಾಗಿ ಗಮನಿಸಬೇಕಾದ ಸಂಗತಿ. ಇಲ್ಲಿ ಪುರುಷನ ಅಸ್ತಿತ್ವದ ಬಗೆಗಿನ ಚಿಂತನೆಯಲ್ಲಿ ಸಂಪೂರ್ಣ ಭಿನ್ನತೆಯಿದೆ. ಅವನ ಸ್ವರೂಪವೇ ಇಲ್ಲಿ ಬದಲಾಗಿ ಹೋಗುತ್ತದೆ. ಪುರುಷನ ಅತೃಪ್ತತೆ ಮಹಿಳೆಯನ್ನು ಯಶಸ್ಸಿನೆಡೆಗೆ ಕೊಂಡೊಯ್ಯುತ್ತದೆನ್ನುವುದು ಸೋಜಿಗವೆನಿಸಿದರೂ ಸತ್ಯ.

ಇದಿಷ್ಟು ಸ್ತ್ರೀಯರ ಬದುಕಿನಲ್ಲಿ ಅವಳ ಇನಿಯ, ಸಂಗಾತಿಯಾಗಿರುವ ಗಂಡಿನ ಬಗೆಗಿನ ಚಿಂತನೆಯಾದರೆ, ಅವಳ ಬದುಕಿನ ಮತ್ತೊಂದು ಪರ್ವ ಮಕ್ಕಳಿಂದ ಆರಂಭ. ನವಮಾಸ ತನ್ನ ಮಗುವನ್ನು ಹೊತ್ತ ತಾಯಿ, ಮಗು ಜನಿಸಿದಾಗ ಅನುಭವಿಸುವ ಆನಂದ ಇಲ್ಲಿ ಮೂಡಿದೆ.

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೭೮

ಹೊತ್ತವಳನು ಕಾಲಲಿ ಒದ್ದು

ಜಗಕೆ ಇಳಿದು ಬಂದ ಕಂದನನು

ಎದೆಗೊತ್ತಿ ಹಾಲೂಡಿಸಿ ಬೆಚ್ಚಗೆ ಕಾಯ್ದು

ಉಸಿರುಕೊಟ್ಟು ಆಕಾರ ಹಚ್ಚಿ

ತನ್ನನ್ನೇ ಹೊರಗೆ ನೋಡುವ ತಾಯಿ।[೧] (ಬಂಧ(ನ) ಮುಕ್ತಿ)

ಇಲ್ಲಿ ತನ್ನ ಮಗನ ಇರುವಿಕೆಯಲ್ಲಿ, ಅವನಲ್ಲಿ ತನ್ನನ್ನು ಕಾಣುವ ತಾಯಿಗೆ ತಾನೇ ಅವನಾಗಿ ಕಾಣುವ ಬಾಂಧವ್ಯವಿದೆ. ತನ್ನಿಡೀ ಬದುಕು ಅವನಿಗಾಗಿ, ಅವನ ಏಳ್ಗೆಗಾಗಿ ಸಮರ್ಪಿಸುವಳು ತಾಯಿ. ಮಗನು ಬೆಳೆದು ಮಾತು, ನಡಿಗೆ ಕಲಿತ ಸಂದರ್ಭದಲ್ಲಿ ಅವಳ ಮಮತೆಯ ಉತ್ಕರ್ಷ ಸ್ಥಿತಿ ಗೋಚರಿಸುತ್ತದೆ.

ನಡಿಗೆಯೇ ನರ್ತನವು

ಇವನ ನುಡಿ ಮುರುಳಿನಾದ

ಬೇಡಿದರೆ ನೀಡುವನು ಬಾನಷ್ಟು ಹರ್ಷ

ಈ ನನ್ನ ಮುದ್ದು ಅಮೋಘ ವರ್ಷ[೨] (ಬಾಲ ಪರ್ವ)

ಮಗನ ನಡೆ-ನುಡಿಗಳು ತಾಯಿಯಲ್ಲಿ ನವ ಚೈತನ್ಯವನ್ನು ಉಂಟು ಮಾಡುತ್ತದೆ. ತನ್ನ ಬದುಕಿನ ಸರ್ವಸ್ವವನ್ನು ಅವನಿಗೆ ಧಾರೆ ಎರೆದು ಅವನಿಂದ ಕೇವಲ ಸಂತಸವನ್ನು ಮಾತ್ರ ಬೇಡುವಳು. ಇಲ್ಲಿ ತಾಯಿಗೆ ಅವಳ ಮಗನ ಅಸ್ತಿತ್ವ ಆಕೆಯ ಜೀವನದಲ್ಲೇ ಅತ್ಯಂತ ಪ್ರಮುಖವೆನಿಸುತ್ತದೆ.

---

೧) ವೀಣಾ ಬನ್ನಂಜೆ : ಅಕ್ಕನ ಹಾದಿ -೧೬

೨) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ -೨೫

ಹೀಗೆ ಮಹಿಳಾ ಬದುಕಿನಲ್ಲಿ ಪುರುಷನ ಅಸ್ತಿತ್ವವು ಭಿನ್ನ ನೆಲೆಗಳಲ್ಲಿ ಕಾಣಸಿಗುತ್ತದೆ. ಪ್ರಕೃತಿಯ ಸೃಷ್ಟಿಯಲ್ಲಿ ಸ್ತ್ರೀ-ಪುರುಷರ ಅಸ್ತಿತ್ವ ಪರಸ್ಪರ ಅತ್ಯಂತ ಅಗತ್ಯ ಹಾಗೂ ಅನಿವಾರ್ಯ. ಒಬ್ಬರಿಲ್ಲದೆ ಮತ್ತೊಬ್ಬರು ಇರುವುದು ಅಸಾಧ್ಯ. ಮಹಿಳಾ ಕಾವ್ಯಗಳಲ್ಲಿ ಕಾಣಬಹುದಾದ ಪುರುಷನ ಅಸ್ತಿತ್ವದ ನೆಲೆಗಳು ಭಿನ್ನವಾಗಿದೆ. ಒಂದೆಡೆ ಪುರುಷನಿಲ್ಲದ ಸ್ತ್ರೀಯ ಚಿತ್ರಣವಿದ್ದರೆ, ಮತ್ತೊಂದೆಡೆ ಆತನಿಲ್ಲದೆಯೂ ಬದುಕ ಬಲ್ಲವರ ಚಿತ್ರಣವಿದೆ. ಆತನಲ್ಲೇ ಕೆಲವರು ಲೀನವಾಗಿ ಬಿಡುವಂತೆ ತೋರಿದರೆ, ಮತ್ತೊಬ್ಬರು ಆತನೊಳಗೂ ಬೆಳೆಯುವ ಹಂಬಲ ತೋರುತ್ತಾರೆ. ಸ್ವತಂತ್ರ ಅಸ್ತಿತ್ವದ ಬಗೆಗೆ ಮಹಿಳೆಯ ಚಿಂತನೆ ಸಾಗಿದೆ. ಗಂಡಿನ ಅವಶ್ಯಕತೆಯನ್ನು ಸರಿಯಾಗಿ ಅರಿತಿರುವ ಮಹಿಳೆಯರು ಅವನಿದ್ದಾಗಲೂ, ಇಲ್ಲದಿದ್ದಾಗಲೂ ಅಥವಾ ಇದ್ದು ಇಲ್ಲದಂತಿರುವಾಗಲೂ ಬದುಕುವ ಪರಿಯನ್ನು ಅರಿತಿದ್ದಾರೆ. ಪುರುಷನ ಅಸ್ತಿತ್ವದಲ್ಲೇ ತನ್ನ ಅಸ್ತಿತ್ವವನ್ನು ಅಡಗಿಸಿಟ್ಟು, ಅವನ ಅಧೀನಳಾಗಿ ಬಾಳಬೇಕಾದ ಕಾಲವೊಂದಿತ್ತು. ಆದರೆ ಇಂದು ಮಹಿಳೆಯರು ತಮ್ಮ ಜೀವನದಲ್ಲಿ ಆತನ ಅಗತ್ಯತೆಯನ್ನು ಸರಿಯಾಗಿ ಗ್ರಹಿಸಿದ್ದಾರೆ. ಅವನಿಗೆ ಅಧೀನಳಾಗೇ ಉಳಿಯಬೇಕಾದ ಅವಶ್ಯಕತೆ ಇಂದು ಆಕೆಗಿಲ್ಲ.

ಹೆಂಡತಿಗೆ ಗಂಡನ ಅಸ್ತಿತ್ವ ಎಷ್ಟು ಮುಖ್ಯವೋ, ತಾಯಿಗೆ ಮಗನೂ ಅಷ್ಟೇ ಮುಖ್ಯ. ಮಗನ ಆಟದಲ್ಲಿ, ನಡೆ-ನುಡಿಯಲ್ಲಿ, ಅವನ ಏಳ್ಗೆಯಲ್ಲಿ ತನ್ನನ್ನು ತಾನು ಕಾಣುವಲ್ಲಿ, ಸಂಭ್ರಮಿಸುವಲ್ಲಿ ಹೆಣ್ಣಿನ ಬಾಳಿನಲ್ಲಿ ತಂದೆ, ಗಂಡ, ಮಗ, ಸಹೋದರ ಎಲ್ಲವೂ ಆಗಿರುವ ಗಂಡು ಭಿನ್ನ ನೆಲೆಗಳಲ್ಲಿ ತನ್ನ ಪಾತ್ರವನ್ನು ನಿರ್ವಹಿಸುತ್ತಾನೆ. ತನ್ನ ಕರ್ತವ್ಯ, ಜವಾಬ್ದಾರಿಗಳನ್ನು ಸರಿಯಾಗಿ ನಿರ್ವಹಿಸಿದಾಗ ಮಾತ್ರ ಆತ ಹೆಣ್ಣಿಗೆ ಆಪ್ತನಾಗಲು ಸಾಧ್ಯ.

ಹೀಗೆ ಮಹಿಳೆಯರ ಬದುಕಿನಲ್ಲಿ ಪುರುಷನ ಅಸ್ತಿತ್ವವು ಭಿನ್ನ ನೆಲೆಗಳಲ್ಲಿ ಗೋಚರಿಸುತ್ತದೆ. ಮಹಿಳಾ ಕಾವ್ಯಗಳ ಮುಖೇನ ಮಹಿಳೆಯರ ಬದುಕಿನ ಒಂದು ಭಾಗವಾದ ಪುರುಷನು ಎಷ್ಟು ಪ್ರಾಮುಖ್ಯತೆ ಪಡೆದಿದ್ದಾನೆ, ಯಾವೆಲ್ಲಾ ನೆಲೆಯಲ್ಲಿ ಅದು ಪ್ರಮುಖವೆನಿಸಿದೆ ಅಥವಾ ಅಮುಖ್ಯವೆನಿಸಿದೆ ಎಂದು ತಿಳಿಯಬಹುದು.

# ಅಧ್ಯಾಯ – ೩

# ಮಹಿಳಾ ಕಾವ್ಯಗಳಲ್ಲಿ ಚಿತ್ರಿತವಾಗಿರುವ

# ಪುರುಷ ಪಾತ್ರಗಳ ವೈವಿಧ್ಯತೆ

ಮಹಿಳಾ ಕಾವ್ಯಗಳು ಮಹಿಳೆಯರ ಅಭಿಪ್ರಾಯಗಳಿಗೆ ಒಂದು ಸೂಕ್ತ ವೇದಿಕೆಯಾಗಿದೆ. ಇದುವರೆಗೂ ಮೌನವಾಗಿದ್ದ ಮಹಿಳಾ ವರ್ಗದ ಅನಿಸಿಕೆಯ ಅಭಿವ್ಯಕ್ತಿಗೆ ಬರವಣಿಗೆ ಪ್ರಮುಖ ಮಾಧ್ಯಮವಾಯಿತು. ಕಾವ್ಯ ಪ್ರಕಾರ ಅವರ ನೆಚ್ಚಿನ ಸಾಹಿತ್ಯ ಪ್ರಕಾರವಾಯಿತು. ಅವರ ಸುಪ್ತ ಮನಸ್ಸಿನ ಗುಪ್ತ ಭಾವನೆಗಳಿಗೆ ಸಹಜವಾಗಿಯೇ ಕಾವ್ಯ ಸ್ಪಂದಿಸಿತು. ಮಹಿಳೆಯರು ತಮ್ಮ ನೋವು-ನಲಿವುಗಳನ್ನು ಕಾವ್ಯಗಳಲ್ಲಿ ವ್ಯಕ್ತಪಡಿಸಿದರು. ಅವರ ಬದುಕನ್ನು ನಿಯಂತ್ರಿಸುತ್ತಿದ್ದ ಪುರುಷನ ವಿರುದ್ಧ ದನಿ ಎತ್ತಲಾರಂಬಿಸಿದರು. ಪುರುಷರ ಬಗೆಗಿದ್ದ ತಮ್ಮ ನಿಲುವುಗಳನ್ನು ನಿರಾತಂಕವಾಗಿ ಪ್ರಕಟಪಡಿಸಿದರು. ಹೀಗೆ ರಚಿತವಾದ ಕಾವ್ಯಗಳಲ್ಲಿ ಪುರುಷನ ಬಗೆಗಿನ ನಿಲುವುಗಳೇನು, ಅವನು ನಿರ್ವಹಿಸುವ ಪಾತ್ರ ಎಂತದ್ದು ಇತ್ಯಾದಿಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮಹಿಳೆಯ ಬದುಕಿನಲ್ಲಿ ಪುರುಷ ನಿರ್ವಹಿಸುವ ಪಾತ್ರಗಳೇನು, ಅದರ ವೈವಿಧ್ಯತೆ ಏನು ಎಂಬುದನ್ನು ಇಲ್ಲಿ ಮುಖ್ಯವಾಗಿ ನೋಡಲಾಗಿದೆ. ಒಟ್ಟು ಮಹಿಳಾ ಕಾವ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ನಮಗೆ ಕಾಣುವ ಪ್ರಮುಖ ಪುರುಷ ಪಾತ್ರಗಳು ಎರಡು ರೀತಿಯವು. ೧) ಪೌರಾಣಿಕ ಪಾತ್ರಗಳು ೨) ಸಾಮಾಜಿಕ ಪಾತ್ರಗಳು. ಪೌರಾಣಿಕ ಪಾತ್ರಗಳಲ್ಲಿ ಪುರಾಣಗಳಲ್ಲಿ ಬರುವ ಪುರುಷ ಪಾತ್ರಗಳನ್ನು ಮಹಿಳೆಯರು ಚಿತ್ರಿಸಿರುವ ಬಗ್ಗೆ, ಅವರ ಅಭಿಪ್ರಾಯಗಳ ಬಗ್ಗೆ ಮುಖ್ಯವಾಗಿ ಗಮನ ಹರಿಸಲಾಗಿದೆ. ಸಾಮಾಜಿಕ ಪಾತ್ರಗಳೆಂದಾಗ ಅಲ್ಲಿ ಪುರುಷ ನಿರ್ವಹಿಸುವ ಹಲವು ಪಾತ್ರಗಳು ಗೋಚರಿಸುತ್ತದೆ. ಆದರೆ ಅತಿ ಹೆಚ್ಚಾಗಿ ಮಹಿಳಾ ಕಾವ್ಯಗಳಲ್ಲಿ ಕಂಡುಬರುವ ಪುರುಷನ ಸಾಮಾಜಿಕ ಪಾತ್ರಗಳಲ್ಲಿ ಮುಖ್ಯವಾಗಿ ಪ್ರೇಮಿ ಅಥವಾ ಗೆಳೆಯ, ಪತಿಯ ಪಾತ್ರಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**೧) ಪೌರಾಣಿಕ ಪಾತ್ರಗಳು :-** ಸಾಹಿತ್ಯ ಚರಿತ್ರೆಯಲ್ಲೇ ವಿಶಿಷ್ಟ ಕಾಲಘಟ್ಟವಾದ ದಲಿತ, ಬಂಡಾಯ ಚಳುವಳಿಯ ನಂತರದ ಸ್ತ್ರೀವಾದಿ ಚಳುವಳಿಯ ಮೇಲೆ ಸಾಕಷ್ಟು ಪರಿಣಾಮವನ್ನೇ ಬೀರಿದೆ. ಮಹಿಳೆಯರಲ್ಲಿ ಅನ್ಯಾಯಗಳನ್ನು ಪ್ರಶ್ನಿಸುವ, ವಿರೋಧಿಸುವ ಮನೋಭಾವ ಬೆಳೆಯಲು ಕಾರಣವಾಗಿದೆ. ಪುರುಷ ನಿರ್ಮಿತ ಮೌಲ್ಯಗಳ ಬಂಧನದ ಅಡಿಯಲ್ಲಿ ನರಳುತ್ತಿದ್ದ ಹೆಣ್ಣು ಪ್ರತಿಭಟನೆಯ ಹಾದಿ ತುಳಿಯಲು ಇದರಿಂದ ಸಾಧ್ಯವಾಯಿತು. ವಾಸ್ತವದ ಬಗ್ಗೆ ಮಾತ್ರ ಚಿಂತಿಸದ ಮಹಿಳೆಯರು ಪುರಾಣದ ಬಗ್ಗೆಯೂ ತಮ್ಮ ಆಲೋಚನೆಗಳನ್ನು ವಿಸ್ತರಿಸಿದ್ದಾರೆ. ಅಲ್ಲಿಯೂ ನಡೆದಂತಹ ಪುರುಷರ ದೌರ್ಜನ್ಯಗನ್ನು ಖಂಡಿಸಿದ್ದಾರೆ. ಪುರಾಣಗಳನ್ನು ಹೊಸ ದೃಷ್ಟಿಕೋನದಲ್ಲಿ ನೋಡುವ ಪರಿಪಾಠವನ್ನೇ ಇವರು ಹುಟ್ಟುಹಾಕಿದರು. ಪುರಾಣವನ್ನು ವಾಸ್ತವದಲ್ಲಿಟ್ಟು ನೋಡುವ ಮೂಲಕ ಮತ್ತಷ್ಟು ಭಿನ್ನ ಆಲೋಚನೆಗಳಿಗೆ ಎಡೆ ಮಾಡಿಕೊಟ್ಟರು. ಮುಖ್ಯವಾಗಿ

ಇದುವರೆಗೂ ಇದ್ದ ಪುರುಷ ಕೇಂದ್ರಿತ ದೃಷ್ಟಿಕೋನದ ಬದಲಾಗಿ ಸ್ತ್ರೀ ಕೇಂದ್ರಿತ ದೃಷ್ಟಿಕೋನ ಬೆಳೆಯಿತು. ಈ ಬದಲಾವಣೆಯಿಂದ ಪುರಾಣ ಪಾತ್ರಗಳ ಬಗೆಗೆ ಭಿನ್ನ ಚಿಂತನೆಗಳು ಮೂಡಲು ಸಾಧ್ಯವಾಯಿತು. ಇದರಿಂದಾಗಿ ಪತಿವ್ರತೆಯರಾಗಿ ಕಂಡು ಬರುತ್ತಿದ್ದ ಸೀತೆ, ದ್ರೌಪದಿ, ಕುಂತಿ, ಅಹಲ್ಯೆ ಮುಂತಾದವರು ಇಂದು ಪುರುಷ ದೌರ್ಜನ್ಯಕ್ಕೆ ಒಳಗಾದ ಸ್ತ್ರೀ ಪಾತ್ರಗಳಾಗಿ ಗೋಚರಿಸುತ್ತಾರೆ. ಮಾದರಿ ಪುರುಷರೆನಿಸಿಕೊಂಡಿದ್ದ ರಾಮ, ಶಿವ ಮುಂತಾದವರು ಶೋಷಕರ ಸಾಲಿನಲ್ಲಿ ನಿಲ್ಲುತ್ತಾರೆ. ಇದರಿಂದಾಗಿ ಪುರಾಣವನ್ನು ಪುನರ್ ವಿಮರ್ಶಿಸಬೇಕಾದ, ಅದರ ಒಳ ಸತ್ಯಗಳನ್ನು ಅರಿಯಬೇಕಾದ ಅವಶ್ಯಕತೆ ಇಂದು ಹೆಚ್ಚಾಗಿದೆ.

ರಾಮ ಮರ್ಯಾದಾ ಪುರುಷೋತ್ತಮ, ಏಕಪತ್ನೀವ್ರತಸ್ಥ. ಅನ್ಯಾಯಗಳನ್ನು ಖಂಡಿಸಿ ನ್ಯಾಯದ ಪರವಾಗಿದ್ದವನು. ಗಂಡನಾಗಿ ಸೀತೆಗೆ ಈತ ಒದಗಿಸಿದ 'ನ್ಯಾಯ'ವನ್ನು ನೋಡಿದಾಗ ಈತನ ನ್ಯಾಯಾನ್ಯಾಯದ ಕಲ್ಪನೆಗಳ ಮೇಲೆಯೇ ಜಿಜ್ಞಾಸೆ ಮೂಡದಿರದು. ಅವಳದಲ್ಲದ ತಪ್ಪಿಗೆ ಸೀತೆಯನ್ನು ಅಗ್ನಿ ಪರೀಕ್ಷೆಗೆ ದೂಡಿದ. ಸಾಲದೆಂಬಂತೆ ಗರ್ಭಿಣಿಯನ್ನು ಕಾಡಿಗಟ್ಟಿದ.

> ಕ್ಷಣದಲ್ಲಿ ಕರಗಿಹೋಗಿತ್ತು ಕನಸು,
>
> ಎದೆಯಾಸರೆ ತಪ್ಪಿ,
>
> ಪ್ರಪಾತಕ್ಕೆ ಬಿದ್ದಿದ್ದೆ,
>
> ಕಣ್ತೆರೆಯುವುದರಲ್ಲಿ
>
> ಕಾಡು ಪಾಲಾಗಿದ್ದೆ
>
> ನಕಲಿ ಪ್ರೇಮದ ಪಿಂಡ ಹೊತ್ತು[೧] (ಅಸ್ಮಿತೆ)

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೨೨೨

ಸೀತೆಯ ಪಾಲಿಗೆ ರಾಮನ ಈ ಕೃತ್ಯ ಸಹಿಸಲಸಾಧ್ಯವಾದುದು. ಪುರಾಣದ ಸೀತೆ ಇಲ್ಲಿ ಮನಬಿಚ್ಚಿ ಮಾತನಾಡಿದ್ದಾಳೆ. ಅವಳ ಮೇಲಿನ ಅವನ ಪ್ರೇಮ ಬರೀ ಭ್ರಮೆಯಾಗಿ ಕಂಡಿದೆ, ಅವನದು ನಕಲಿ ಪ್ರೇಮವೆನಿಸಿದೆ. ಅವನ ಈ ಅನ್ಯಾಯದ ವಿರುದ್ಧ ಪ್ರತಿಭಟನೆ ಇದೆ.

ಅಗಸನ ಕತ್ತೆಗೆ ಸಮವಂತೆ

ಅರಸೊತ್ತಿಗೆಯ ನ್ಯಾಯ![1] (ಹೇರಾಮ್)

ಅಗಸನ ಮಾತು ಕೇಳಿ ಪತ್ನಿಯನ್ನೇ ಕಾಡಿಗಟ್ಟಿದ ರಾಮನ ನ್ಯಾಯ ವ್ಯಂಗ್ಯಕ್ಕೆ ಗುರಿಯಾಗಿದೆ. ಈ ಎಲ್ಲಾ ಕಾರಣಗಳಿಗಾಗಿ ರಾಮ ಮಹಿಳಾ ಕಾವ್ಯಗಳಲ್ಲಿ ತನ್ನ ಮರ್ಯಾದಾ ಪುರುಷೋತ್ತಮನ ಸ್ಥಾನದಿಂದ ಕೆಳಗಿಳಿದಿದ್ದಾನೆ. ರಾಮ ತನ್ನ ಅನ್ಯಾಯಗಳಿಂದ ಇಲ್ಲಿ ಪ್ರಶ್ನೆಗೆ ಗುರಿಯಾಗಿದ್ದಾನೆ.

ಪುರಾಣ ಪಾತ್ರಗಳಲ್ಲಿ ಪ್ರಮುಖವಾದ ಮತ್ತೊಬ್ಬ ಪುರುಷ ಶಿವ. ಈತ ಜಗದೊಡೆಯ. ಅರ್ಧನಾರೀಶ್ವರನಾಗುವ ಮೂಲಕ ಜಗತ್ತಿಗೆ ದಾಂಪತ್ಯದ ಅರ್ಥ ತೋರಿಸಲೆತ್ನಿಸಿದವ. ಆದರೆ ಮಹಿಳಾ ಕಾವ್ಯಗಳಲ್ಲಿ ಇವನ ಅರ್ಧನಾರೀಶ್ವರತ್ವವೇ ಪ್ರಶ್ನೀಡಾಗಿದೆ.

ನಾಚಿಕೆಯಾಗಬೇಕು ಜೀವಕ್ಕೆ

ಅರ್ಧ ಕ್ರೆಡಿಟ್ ತಗೆದುಕೊಳ್ಳುವುದಕ್ಕೆ

ಹೆಣ್ತನದ ಸೂಚನೆಯೆಂದು ಒಂದು

ಸ್ತನ ಧರಿಸಿಬಿಟ್ಟರೆ ಆಯಿತೇ ಲಿಂಗಕ್ಕೆ?

ಅರಬಸಿರು ತಡೆಯಬಹುದೇ ಪೂರ್ಣಗರ್ಭದ ಹೊರೆ?

---

೧) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂಗಳು - ೧೪೭

ಇಡೀ ದೇಹವೇ ತಡೆಯಲಾಗದು

ಪಾರ್ಶ್ವಕ್ಕೆ ಸಾಕೆ ಪ್ರಾಯ ಬೇಗ?[1] (ಅರ್ಧನಾರೀಶ್ವರ)

ಅರ್ಧ ದೇಹದಿಂದ ಮನುಷ್ಯ ಮಾತ್ರನಾದವನು ಯಾವ ಕೆಲಸವನ್ನೂ ಮಾಡಲು ಸಾಧ್ಯವಿಲ್ಲ ಎಂಬ ತಿಳುವಳಿಕೆ ಶಿವನ ಬಗೆಗಿನ ವ್ಯಂಗ್ಯಕ್ಕೆ ಕಾರಣವಾಗಿದೆ. 'ಗಂಡಂದಿರ ವೀರ್ಯ ತಾನೇ? ಉಳಿದಂತೆ ಕೈಕಾಲು ಎದೆಹೊಟ್ಟೆ ಬರಿ ಬವಣೆ' ಎಂಬಲ್ಲಿ ಶಿವನೂ ಕೂಡ ಎಲ್ಲ ಸಾಮಾನ್ಯರಂತೆ ಸಾಮಾನ್ಯ. ಹೆಣ್ಣು ಒಬ್ಬಳೆ ಇರಬಲ್ಲೆನೆಂದು ನಿರ್ಧಾರ ಮಾಡಿದರ ಈಶ್ವರನಾದವನೂ ಮೂಲೆಗುಂಪಾಗಬೇಕಾಗುತ್ತದೆ ಎಂದು ಎಚ್ಚರಿಕೆ ನೀಡಲಾಗಿದೆ. ಸ್ತ್ರೀ ಮನಸ್ಸು ಮಾಡಿದರೆ ಪುರುಷನನ್ನು ಬಲಹೀನಗೊಳಿಸಬಹುದು.

ಶಿವನ ಪರಸ್ತ್ರೀ ಸಂಗ, ಬಹುಪತ್ನಿತ್ವ ಗೌರಿಯಲ್ಲಿ ಮೂಡಿಸುವ ನೋವು, ಆತಂಕ ಅಪಾರ. ಅವಳೊಳಗಿನ ವ್ಯಥೆಯ ಬಿಸಿ ಶಿವನನ್ನೇ ಸುಡುವಷ್ಟು ಪರಿಣಾಮಕಾರಿಯಾದುದು.

ಮೂಗಾಲು ಮಣೆಯಲ್ಲಿ ಮೂಗಣ್ಣನವನ

ಕುಳ್ಳಿರಿಸಿ ಪ್ರೀತಿಯೊತ್ತಿ

ಮೂಜಗದಲೋಡಾಡಿ ಎಂತು ದಣಿದವೋ ಪಾದ

ಎಂಬ ನೆಪತುದಿಯಿಂದ ಘೂಳನೆತ್ತಿ

ಯಾರ ಮನೆ ಬೀದಿಯದು ಪತ್ತೆ ಹಚ್ಚಿ

ನಗುವ ನಟರಾಜನನು ಕರವಳೋ ಸ್ನಾನಕ್ಕೆ ದುಃಖ ಹತ್ತಿಕ್ಕಿ

ಮುಗಿಯಿತೇ ಬೇಟೆ? ಪ್ರಶ್ನೆ ಚುಚ್ಚಿ[2] (ಶಿವನ ಮೀಸುವ ಹಾಡು)

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೧೦೩

೨) ವೈದೇಹಿ ಅವರ ಆಯ್ದ ಕವಿತೆಗಳು - ೨೪

ಶಿವನ ಅನ್ಯ ಸ್ತ್ರೀ ಸಂಗ ಗೌರಿಯಲ್ಲಿ ಅವನ ಬಗೆಗೆ ಬೇಸರ, ವ್ಯಂಗ್ಯ ಮೂಡಲು ಕಾರಣವಾಗಿದೆ. ಶಿವನ ಈ ಕಾರ್ಯದ ಬಗೆಗೆ ಗೌರಿಯಲ್ಲಿ ಮೌನ ಪ್ರತಿಭಟನೆ ಕಾಣುತ್ತದೆ. ಶಿವ ಸುಳ್ಳುಗಾರ. ಈ ಸುಳ್ಳುತನದ ಬಗೆಗೆ ಗೌರಿಯಲ್ಲಿ ಒಂದು ರೀತಿಯ ತಿರಸ್ಕಾರವಿದೆ. ಶಿವನ ಚಿತ್ರಣವೇ ಇಲ್ಲಿ ಬದಲಾಗುತ್ತಾ ಹೋಗುತ್ತದೆ. ಇದು ಮಹಿಳಾ ಕಾವ್ಯದ ವಿಶೇಷತೆ.

ಗೌತಮ ಮಹರ್ಷಿ ಪುರಾಣದ ಮತ್ತೊಂದು ಪ್ರಮುಖ ಪಾತ್ರ. ಅಹಲ್ಯೆಯ ಪತಿ. ಅವಳು ಕಲ್ಲಾಗುವಂತೆ ಮಾಡಿದವ. ತಪ್ಪಲ್ಲದ ತಪ್ಪಿಗೆ ಅಹಲ್ಯೆ ಕಲ್ಲಾದಳು. ತಪ್ಪು ಮಾಡಿದ ಗೌತಮ ಶ್ರೇಷ್ಠನೆನಿಸಿಕೊಂಡ. ಜಗತ್ತಿನೆದುರು ಅಹಲ್ಯೆ ದೋಷಿ ಎನಿಸಿಕೊಂಡಳು. ಆದರೆ ಈ ದೋಷಕ್ಕೆ ಕಾರಣನಾದ ಗೌತಮ ಮಾತ್ರ ಮಹಾನ್ ಪುರುಷನಾದ.

ನನಗೆ ಗೊತ್ತು

ಮತ್ತೆ ಗೌತಮನ ಸ್ಪರ್ಶ

ಹಡೆಯತ್ತಲಾರದು,

ನನ್ನೊಳಗೆ ಏನನ್ನೂ ಬಿತ್ತಲಾಗದು.

ರಾಮಸ್ಪರ್ಶಕ್ಕೆ

ಶಿಲೆ, ಸ್ಫೋಟವಾಗಿದೆ ಅಷ್ಟೇ,

ಹೆಣ್ಣಾಗಲಿಲ್ಲ![೧] (ಅಹಲ್ಯೆ)

ಗೌತಮ ತಾನು ನಿರ್ವಹಿಸಬೇಕಾದ ಕರ್ತವ್ಯಗಳನ್ನು ಸರಿಯಾದ ನಿರ್ವಹಿಸಿದ್ದರೆ ಅಹಲ್ಯೆ ಇಂದ್ರನಿಗೊಲಿಯುವ ಪ್ರಸಂಗವೇ ಬರುತ್ತಿರುರಲಿಲ್ಲ. ಆದರೂ ಗೌತಮನನ್ನು, ಅವನ ತಪ್ಪನ್ನು ಈ ಜಗತ್ತು ಮನ್ನಿಸಿತು.

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೮೮

ಅಹಲ್ಯೆಗೆ ತಿಳಿದಿತ್ತು ಗೌತಮನಿಂದ ತನಗಾಗಿ ಯಾವ ಸುಖವೂ ದೊರೆಯುವುದಿಲ್ಲ ಎಂದು ರಾಮನ ಸ್ಪರ್ಶ ಶಿಲೆಯನ್ನು ಸ್ಫೋಟಿಸಿತೇ ವಿನಃ ಹೆಣ್ಣಾಗಿ ಮಾಡಲು ಸಾಧ್ಯವಾಗಲೇ ಇಲ್ಲ.

ಪುರಾಣದ ಮತ್ತೊಂದು ವಂಚಕ ಪಾತ್ರ ಪರಶುರಾಮ. ಹೆತ್ತ ತಾಯಿಯನ್ನೇ ಕೊಂದವ. ತಂದೆಯ ಕಟ್ಟಾ ಆಜ್ಞಾ ಪಾಲಕ. ಪ್ರೀತಿಯ ತುತ್ತಿಟ್ಟ ಒಡಲ ಸಾವನ್ನು ಬಯಸಿ 'ನಿನ್ನ ಸಾವೇ ನನ್ನ ಬದುಕು' ಎಂದ ಕೃತಘ್ನ. ಆದರೂ ಇತಿಹಾಸದಲ್ಲಿ ಹೆಸರಾದವ. ತ್ಯಾಗಮಯಿ ತಾಯಿ ರೇಣುಕೆ ಹೇಳ ಹೆಸರಿಲ್ಲದವಳಾದಳು.

ಕಂದಾ

ಪರಶುರಾಮನೀಗ ಜಗಮಾನ್ಯ

ಚರಿತ್ರೆಯಾಗದು ರೇಣುಕೆಯ ವಿಷಾದಗಾನ

ತುತ್ತಿತ್ತ ಋಣಕ್ಕೆ

ಅವನ ಇತಿಹಾಸದಲ್ಲಿ



ಅನಿವಾರ್ಯವಾಗಿದ್ದಾಳೆ ರೇಣುಕೆ

ಅವನು ಎತ್ತರಕ್ಕೆ ಬೆಳೆದು ಬಿಟ್ಟ ನೆಪಕ್ಕೆ

ಅವನ ಭವಿಷ್ಯಕ್ಕೆ ಬೆಳೆದು ಬಿಟ್ಟ ನೆಪಕ್ಕೆ

ಅವನ ಭವಿಷ್ಯದಿಂದ ಹೊರಕ್ಕೆ! [೧] (ಪ್ರತಿಫಲ)

---

೧) ರೂಪ ಹಾಸನ : ಕಡಲಿಗಷ್ಟೊಂದು ಬಾಗಿಲು -೮೬

ರೇಣುಕೆಯ ವಿಷಾಧ, ನೋವು ಜಗತ್ತಿಗೆ ಅವಶ್ಯಕವಲ್ಲ. ಆದರೆ ಆಜ್ಞೆ ಪಾಲಿಸಿದ ಪರಶುರಾಮ ಜಗಮಾನ್ಯ. ಇದು ನಮ್ಮ ಚರಿತ್ರೆಯ ವ್ಯಂಗ್ಯ. ಈ ಮಾನ್ಯತೆಗೆ ಕಾರಣ ಇದನ್ನು ಕಟ್ಟಿದ್ದು, ಕೊಟ್ಟಿದ್ದು ಎಲ್ಲ ಪುರುಷರೇ ಆದ್ದರಿಂದ.

ಪುರಾಣದ ಮತ್ತೊಂದು ಪ್ರಮುಖ ಪಾತ್ರ ರಾವಣ. ಈತನ ಬಗೆಗೆ ಮಹಿಳಾ ಕಾವ್ಯಗಳು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿವೆ. ಇದುವರೆಗೂ ಶ್ರೇಷ್ಠನೆನಿಸಿದ ರಾಮ ಟೀಕೆಗೆ ಗುರಿಯಾದ. ಆದರೆ ದುಷ್ಟನೆನಿಸಿದ್ದ ರಾವಣ ಸಾತ್ವಿಕನೆನಿಸಿಕೊಂಡಿದ್ದು ಪುರಾಣಗಳ ಪುನರ್‌ಪರಿಶೀಲನೆಯಿಂದ ಸಾಧಿತವಾದ ಸತ್ಯಗಳು.

ಬುದ್ಧನಿಗೆ ಬೋಧಿವೃಕ್ಷದಂತೆ

ಸೀತೆಯ ಹೆಜ್ಜೆ ಇಲ್ಲಿ ಮೂಡಲು

ರಾವಣನ ಸಂಯಮ

ಹಿನ್ನೆಲೆಯೊಳಗಿದೆ. [೧] (ಅಶೋಕ ವನ)

ಸೀತೆ ಸೀತೆಯಾಗಿ ಜಗತ್ತಿಗೆ ತೋರಲು ಕಾರಣವಾದದ್ದು ರಾವಣ ಹಾಗೂ ಅವನ ಸಂಯಮ. ಸೀತೆಯ ತಪಸ್ಸಿನ ಸಿದ್ಧಿಗೆ ರಾಮ ಮಾತ್ರ ಕಾರಣನಲ್ಲ. ಮುಖ್ಯ ಕಾರಣ ರಾವಣ. ರಾವಣನ ವ್ಯಕ್ತಿತ್ವ ಇಲ್ಲಿ ಬೇರೆಯಾಗಿಯೇ ಗೋಚರಿಸುತ್ತದೆ. ದುಷ್ಟನೆಂದು ತಿಳಿದಿದ್ದ ರಾವಣನ ಆಂತರ್ಯದ ಸಾತ್ವಿಕತೆಯ ಮನವರಿಕೆಯಾಗುತ್ತದೆ.

ಪುರಾಣದ ಪ್ರಮುಖ ಕಾವ್ಯ ಮಹಾಭಾರತ. ಇದರ ಪ್ರಸಿದ್ಧ ಪುರುಷ ಮಣಿಗಳು ಪಂಚಪಾಂಡವರು. ಒಬ್ಬೊಬ್ಬರೂ ಪೌರುಷದ ಆಗರ. ಒಂದೊಂದು ವಿದ್ಯೆಯಲ್ಲಿ ಒಬ್ಬೊಬ್ಬರು ಶ್ರೇಷ್ಠರು. ಇವರಿಗೆ ಏಕೈಕ ಪತ್ನಿ ದ್ರೌಪದಿ. ಐದೂ ಜನರಿದ್ದೂ ಜೀವನದ ಪೂರ್ಣ ಸುಖ ಅನುಭವಿಸದವಳು. ಪಾಂಡವರು ಇಲ್ಲಿ ಬೇರೊಂದೇ ತರನಾದ ಭಾವವನ್ನು ಮೂಡಿಸುತ್ತಾರೆ. ಅವರು ಪಾಂಡವರಾಗಿ ಕಾಣುವುದಿಲ್ಲ.

---

೧) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ -೬೪

ಈ ಐವರು 'ಅಪೂರ್ಣ'ರ ಮಧ್ಯೆ,

ಕರ್ಣನೊಬ್ಬನೇ 'ಪೂರ್ಣ'?

ಅಂದರೇನು,

ತುಡಿವ ಎದೆ ಮಿಡಿದ ಮನಗಳ

ಕಾಲಡಿಗೆ ಹಾಕಿ ತುಳಿದು

'ಪ್ರಾಮಾಣಿಕ ಪಟ್ಟದರಸಿ'ಯಾಗಿ

ಮೆರೆವಳು,

ಒಳಗೊಳಗೇ ನರಳಿ ಸತ್ತವಳು ನಾನು,

ಐವರು ನಾಥರಿದ್ದೂ ಅನಾಥ! [೧] (ಅನಾಥೆ)

ಐದೂ ಜನರಿದ್ದೂ ಅನಾಥೆಯಾದ ದ್ರೌಪದಿಯ ತುಡಿತ ಕರ್ಣನ ಮೇಲಿದೆ. ಧರ್ಮರಾಯನ ತಣ್ಣನೆಯ ರಕ್ತ, ಭೀಮನ ಉಕ್ಕಿನೆದೆಯಲ್ಲೂ ಹಿಡಿಂಬೆಯ ನೆನಪು, ಅರ್ಜುನನಲ್ಲಿ ಸುಭದ್ರೆಯ ಭದ್ರ ಕೋಟೆ, ಅವಳ ಸೋದರರ ಬಗೆಗೆ ಅನಾಸಕ್ತಿ ಇವು ಅವಳನ್ನು ಅನಾಥೆಯೆಂಬಂತೆ ಮಾಡಿದೆ. ಪಾಂಡವರ ಅಷ್ಟೂ ಬಲ, ಸಾಮರ್ಥ್ಯಗಳು ಒಬ್ಬ ದ್ರೌಪದಿಯನ್ನು ಸಂತೃಪ್ತಿ ಪಡಿಸಲಾಗದೆ ಅವಳ ಪಾಲಿಗೆ ನಿಷ್ಪ್ರಯೋಜಕವೆನಿಸಿದೆ.

ಅನಿವಾರ್ಯದೊನವಾಸವನೊಪ್ಪಿಕೊಂಡೆಯಾ

ಪಣಕೊಡ್ಡಿ ನಿನ್ನ ಜೂಜಿನಲಿ ಸೋತನೋ

ಆ ಧರ್ಮರಾಯ?

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೮೦

ಹರಿಶ್ಚಂದ್ರನಂತ ಮಾರಿಯೇ ಬಿಟ್ಟನೋ?

ನೆನಪು ಹಾರಿತೆಂದು 'ದುಶ್ಯಂತ'

ಹೊರದೂಡಿದನೇನ?

ಶಾಪಗ್ರಸ್ತ 'ಅಹಲ್ಯೆ'ಯಾಗಿಸಿದನೋ

ಆ ತೆವಲು ಸನ್ಯಾಸಿ? [1] (ಏಕೆ ಮಲಗಿರುವೆ)

ಪುರಾಣ ಪುರುಷರಿಂದ ದೌರ್ಜನ್ಯಕ್ಕೆ ಒಳಗಾದ ಸ್ತ್ರೀಯರ ನೋವನ್ನು ಈ ಕವನ ಧ್ವನಿಸುತ್ತದೆ. ನಳ, ಶ್ರೀರಾಮ, ಧರ್ಮರಾಯ, ದುಶ್ಯಂತ, ಗೌತಮ, ಪರಶುರಾಮ ಹೀಗೆ ಪುರಾಣದ ಶೋಷಕರ ಪಟ್ಟಿಯೇ ಇದೆ. ಹೆಣ್ಣನ್ನು ಶೋಷಿಸುವಲ್ಲಿ, ಅವಳ ಮೇಲೆ ದೌರ್ಜನ್ಯ ಎಸಗುವಲ್ಲಿ ಯಾರಿಗೆ ಯಾರೂ ಕಡಿಮೆಯಿಲ್ಲ. ಎಲ್ಲರ ಶೋಷಣೆಯ ಕೇಂದ್ರ ಸ್ತ್ರೀ. ಅವಳ ಪ್ರತಿಯೊಂದು ನೋವಿಗೂ ಈ ಪುರುಷ ಪ್ರಧಾನ ಸಮಾಜವೇ ಕಾರಣ. ಅವಳನ್ನು ಮೇಲೇಳದಂತೆ ಮಾಡಿಬಿಟ್ಟಿದೆ. ಕವಯಿತ್ರಿಗೆ ಈ ಎಲ್ಲ ಪುರುಷ ಪಾತ್ರಗಳು ಊರ 'ಜಾನುವಾರು'ಗಳಂತ ಕಂಡಿದೆ. ಹಲವು ಶತಮಾನಗಳ ಅನ್ಯಾಯ, ದಬ್ಬಾಳಿಕೆ ಇಂದು ಅವಳ ಈ ಸ್ಥಿತಿಗೆ ಕಾರಣವಾಗಿದೆ. ಇದಕ್ಕೆ ಒಟ್ಟು ಪುರುಷ ಸಮೂಹವೇ ಕಾರಣವಾಗಿದೆ. ಅವಳನ್ನು ಬಯಲಿಗೆ ತಂದು ಹಾಕುವಲ್ಲಿಯವರೆಗೆ ಪುರುಷರ ದಬ್ಬಾಳಿಕೆ ನಡೆದಿದೆ.

ಹೀಗೆ ಪುರಾಣದಲ್ಲಿ ಕಂಡುಬರುವ ಅನೇಕ ಪಾತ್ರಗಳ ಒಳ ಅಂತರ್ಯ ಮಹಿಳಾ ಕಾವ್ಯದಲ್ಲಿ ತೆರೆದುಕೊಂಡಿದೆ. ಇದಕ್ಕೆ ಕಾರಣ ಬದಲಾದ ದೃಷ್ಟಿಕೋನ ಹಾಗೂ ಅರ್ಥೈಸಿಕೊಳ್ಳುವ ಕ್ರಮ. ಪುರಾಣ ಪಾತ್ರಗಳ ಈ ದೋಷಗಳನ್ನು ಕುರಿತು ಮಾತನಾಡುವ, ಪ್ರಶ್ನಿಸುವ, ಅವುಗಳ ವಿರುದ್ಧ ಪ್ರತಿಭಟಿಸುವ ಕಾರ್ಯವನ್ನು ಮಹಿಳಾ ಕಾವ್ಯಗಳು ಮಾಡಿವೆ. ಒಟ್ಟಾರೆ ಪುರಾಣ ಪುರುಷ ಪಾತ್ರಗಳು ಹಿಂದೆಂದಿಗಿಂತ ಅತ್ಯಂತ ಭಿನ್ನವಾಗಿ ಇಲ್ಲಿ ಗೋಚರಿಸುತ್ತವೆ.

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೮೭-೮೮

೨. **ಸಾಮಾಜಿಕ ಪಾತ್ರಗಳು :-** ಸಾಮಾಜಿಕ ಜೀವನದಲ್ಲಿ ಪುರುಷರು ನಿರ್ವಹಿಸುವ ಹಲವು ಪಾತ್ರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿ ತಂದೆ, ಗಂಡ, ಮಗ, ಸಹೋದರ, ಗೆಳೆಯ, ಪ್ರೇಮಿ ಹೀಗೆ ಹಲವು ಪಾತ್ರಗಳನ್ನು ಕಾಣಲು ಸಾಧ್ಯವಿದೆ. ಮಹಿಳಾ ಕಾವ್ಯಗಳಲ್ಲಿ ಅತೀ ಹೆಚ್ಚಾಗಿ ಕಾಣಿಸಿಕೊಂಡಿರುವ ಗಂಡ, ಪ್ರೇಮಿ ,ಗೆಳೆಯ ಹಾಗೂ ಒಟ್ಟು ಪುರುಷ ಸಮುದಾಯ ಕುರಿತ ಕವನಗಳನ್ನು ಮಾತ್ರ ಇಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಈ ಪಾತ್ರಗಳು ಮಹಿಳೆಯರ ಬದುಕಿನಲ್ಲಿ ಎಷ್ಟರ ಮಟ್ಟಿಗೆ ಅಗತ್ಯ, ಅವುಗಳ ಅವಶ್ಯಕತೆ ಏನು, ಈ ಪುರುಷರು ನಿರ್ವಹಿಸುವ ಪಾತ್ರಗಳೆಂತದ್ದು ಎಂಬುದನ್ನು ಅರಿಯುವುದು ಮುಖ್ಯವಾಗಿದೆ.

**ಅ) ಪ್ರೇಮಿ, ಗೆಳೆಯ :-** ಈ ಎರಡೂ ಪಾತ್ರಗಳು ಹೆಚ್ಚೂಕಡಿಮೆ ಒಂದೇ ರೀತಿಯಲ್ಲಿ ಕಾರ್ಯ ನಿರ್ವಹಿಸುವುದರಿಂದ ಇವುಗಳನ್ನಿಲ್ಲಿ ಒಟ್ಟಿಗೆ ನೋಡಲಾಗಿದೆ. ಮಹಿಳಾ ಕಾವ್ಯಗಳನ್ನು ಅವಲೋಕಿಸಿದಾಗ ಈ ಪಾತ್ರಗಳ ಬಗೆಗೆ ಭಿನ್ನ ಅಭಿಪ್ರಾಯವೇನಿಲ್ಲ. ಎರಡೂ ಒಂದೇ ರೀತಿಯಲ್ಲಿ ಚಿತ್ರಿತಗೊಂಡಿವೆ. ಪ್ರತಿಯೊಬ್ಬ ವ್ಯಕ್ತಿಗೂ ಸಂಗಾತಿಯ ಅವಶ್ಯಕತೆ ಇರುತ್ತದೆ. ಮಹಿಳೆಯರು ತಮ್ಮ ಕಾವ್ಯಗಳಲ್ಲಿ ತಮ್ಮ ಸಂಗಾತಿಯಾಗುವ ಪುರುಷನ ಕುರಿತು, ಅವನ ಪ್ರೀತಿಯನ್ನು ಕುರಿತು ಹೇಳುವ ಮೂಲಕ ತಮ್ಮ ಮನೋಲೋಕವನ್ನು ತೆರೆದಿಟ್ಟಿದ್ದಾರೆ. ಈ ಪ್ರೇಮಿಯ ಬಗೆಗೆ ಒಟ್ಟು ಅವಳ ಅಭಿಪ್ರಾಯ, ಚಿಂತನೆಳೇನೆಂದು ಇಲ್ಲಿ ಅರಿಯಲೆತ್ನಿಸಲಾಗಿದೆ.

ಪ್ರೇಮ ಆರಂಭವಾಗುವ ಹಾಗೂ ಆ ನಂತರದ ಪ್ರಕ್ರಿಯೆ ಪ್ರೇಯಸಿಯ ತಲ್ಲಣಗಳು, ಅದಕ್ಕೆ ಕಾರಣವಾಗುವ ಪ್ರಿಯಕರನ ಕುರಿತು ಕವನಗಳು ಬಂದಿವೆ. ಪ್ರಿಯಕರನ ಪ್ರತಿ ಮಿಡಿತಕ್ಕೂ ಪ್ರೇಯಸಿಯ ಸ್ಪಂದನೆಯನ್ನು ಕಾಣಲು ಸಾಧ್ಯವಿದೆ.

ಈ ಒಂದು ಕ್ಷಣದ ಹಿಂದೆ...

ನಿನ್ನ ಭಾರವಾದ ಹೆಜ್ಜೆಗಳು

ನನ್ನ ದಣಿಸುತ್ತವೆ

ಎಂದು ತಿಳಿದಿರಲಿಲ್ಲ.

ನಿನ್ನ ಬಾಡಿದ ಕಣ್ಣಗಳು

ನನ್ನನ್ನು ಕಂಗೆಡಿಸುತ್ತವೆ

ಎಂದು ಕೊಂಡಿರಲಿಲ್ಲ, [1] (ಈ ಒಂದು ಕ್ಷಣದ ಹಿಂದೆ)

ತನ್ನ ಪ್ರಿಯಕರನ ಪ್ರತಿಯೊಂದು ತುಡಿತಕ್ಕೂ ಮಿಡಿಯುವ ಮನಸ್ಸನ್ನು ಇಲ್ಲಿ ಕಾಣಬಹುದು. ಅವನು ಅವಳ ಮನದಾಳದ ಮಿಡಿತವಾಗಿದ್ದಾನೆ, ಹಂಬಲವಾಗಿದ್ದಾನೆ. ಈ ಹಂಬಲದ ಕಾರಣವಾಗಿ ಅವನು ಮನಸ್ಸಿನಲ್ಲೇ ಉಳಿದು ಅವಳನ್ನು ಕಾಡುವವನಾಗಿದ್ದಾನೆ, ಅವಳ ನಿದ್ರೆಯಲ್ಲೂ, ನಿದ್ರೆಯ ನಂತರದಲ್ಲೂ.

ನಾ ಗೆದ್ದೆ, ನಾಗೆದ್ದೆ

ಪ್ರಿಯ,

ನಿದ್ರಾಭಂಗವಾದದಕ್ಕೆ

ಬೇಸರವಿಲ್ಲ,

ನೀನೇ ನನ್ನ

ಬಂಧಿಯಾದೆಯಲ್ಲಾ [2] (ನಾನೆಚ್ಚೆತ್ತಾಗ)

ಹೆಣ್ಣಿನ ಕಣಕಣವು ಇವನ ನೆನಪು ಆವರಿಸಿಕೊಂಡಿದೆ. ಅವಳ ನೆನಪಿನಂಗಳದಲ್ಲಿ ಈತ ಬಂಧಿ. ಈತ ಅವಳ ಮನದಾಳದ ತುಡಿತವಾಗಿದ್ದಾನೆ. ಅವನನ್ನು ತನ್ನೊಳಗೆ ಬಂಧಿಸುವಲ್ಲಿ ಇವಳು ಯಶಸ್ವಿ, ಆತ ಸೋಲೊಪ್ಪಿದ.

---

೧) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂಗಳು - ೪೮

೨) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೦೮

ನಿನ್ನ ಹೃದಯವೊಂದು ಕೋಣೆ ಅಲ್ಲೊಂದು ಪಲ್ಲಂಗ

ಅದರೆಲ್ಲ ಹೊನ್ನ ಹೂ ಕುಸುರಿ ನಾನು

ಈ ಪ್ರೀತಿ ಜೀವಕ್ಕೆ ಅರಸ ನೀನೋ ಹುಡುಗ

ನಿನ್ನೊಲುಮೆ ಹೂವ ಮಕರಂದ ನಾನು [1] (ಭೂಮಿ ಬಾಯಾರಿಕೆಗೆ)

ಒಲುಮೆಯಲ್ಲಿ ಹುಡುಗ ಅರಸ. ತನ್ನ ಹುಡುಗಿಯ ಒಲುಮೆಗೆ ಅವನೇ ಒಡೆಯ. ಅವನ ಪ್ರೀತಿಯ ಸತ್ವ ಇವಳು. ಇವರ ಬದುಕು ಪರಸ್ಪರ ಒಂದಾಗಿ ಹೋಗಿದೆ. ಪರಸ್ಪರ ಅವರ ಅಳಿವು ಉಳಿವು ಮತ್ತೊಬ್ಬರ ವಶದಲ್ಲಿದೆ.

ನನ್ನಳಿವು ಉಳಿವುಗಳೀಗ ನಿನ್ನ ವಶದಲ್ಲಿ

ನಾನೇನು ಮಾಡಲಿ ಒಂಟಿ ಸಲಗ?

ನಿನ್ನೆದೆಯ ಹೊಲವನ್ನು ತೊತ್ತಳದುಳಿಯ ಹೊರಟು

ಬಿದ್ದಿದ್ದು ನಿನ್ನ ಖೆಡ್ಡದಲ್ಲಿ, [2] (ಅಸ್ವಸ್ಥೆ)

ಪ್ರೀತಿಯ ವಿಷಯದಲ್ಲಿ ಹೆಣ್ಣು ಗಂಡಿಗೆ ಪೂರ್ಣವಾಗಿ ಅಧೀನಳಾಗಿದ್ದಾಳೆ. ಪುರುಷನೂ ಇದರಿಂದ ಭಿನ್ನವಾಗಿಲ್ಲ. ಅವಳ ಪ್ರೀತಿ, ಬದುಕು ಎಲ್ಲವೂ ಅವನ ವಶದಲ್ಲಿದೆ. ತನ್ನ ಅಗಾಧ ಪ್ರೀತಿಯ ಮೂಲಕ ಗಂಡು ಹೆಣ್ಣಿನ ಅಸ್ತಿತ್ವವನ್ನು ಪೂರ್ತಿಯಾಗಿ ತನ್ನಲ್ಲಿ ಒಂದಾಗಿಸಿಕೊಂಡಿದ್ದಾನೆ. ಈ ಮೂಲಕ ಅವನಲ್ಲಿ ಅವಳು ಒಂದಾಗಿದ್ದಾಳೆ.

---

೧) ಛಾಯಾ ಭಗವತಿ : ಮಟಾಣಿ ಕೆಂಪು ಶೂ - ೩೨

೨) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೮೬

ನಿನ್ನ ನೆನಪಲ್ಲಿ

ತೊಯ್ದಿರುವ ಪ್ರೀತಿಗೆ

ಸಾಕು ಸುಮ್ಮನಿರೆಂದು

ನೀನು ಗದರಿದರೂ

ಅದು

ನಿನ್ನ ಬಳಿಯೇ ನಿಲ್ಲಬೇಕು

ಏಕೆಂದರೆ

ನೀನೇ ಪ್ರೀತಿಯ ನಿಲ್ದಾಣ! [೧] (ನಿನ್ನ ಪ್ರೀತಿಸಿದಷ್ಟು)

ತನ್ನ ಅಸ್ತಿತ್ವವನ್ನೇ ಪುರುಷನಲ್ಲಿ ಲೀನಗೊಳಿಸುವ ಹೆಣ್ಣಿಗೆ ಪುರುಷನೇ ತನ್ನ ಪ್ರೀತಿಯ ತಾಣವಾಗಿ, ನಿಲ್ದಾಣವಾಗಿ ಗೋಚರಿಸುತ್ತಾನೆ. ಹೆಣ್ಣಿಗೆ ತನಗೆ ದೊರಕುವ ಎಲ್ಲ ಸುಖಗಳಿಗಿಂತ ಗಂಡಿನ ಒಲವು ಅತ್ಯಂತ ಮುಖ್ಯವೆನಿಸುತ್ತದೆ. ಬದುಕು ನೀಡುವ ಸನ್ಮಾನಗಳಿಗೂ ಮಿಗಿಲು ತನ್ನ ಒಲವಿನ ಹುಡುಗನ ಪ್ರೀತಿ, ಸಾಮೀಪ್ಯ.

ಈ ಸನ್ಮಾನದ ಮಧ್ಯದಿಂದೆದ್ದು ಬಂದೇನು

ನಿನ್ನೆದೆಯ ಗೂಡಿನೊಳು ಹಿಡಿದಿಟ್ಟು

ನನ್ನ ಬಾಳ ಬೊಗಸೆಯ ತುಂಬ

ಹೃದಯದೊಲವ ತುಂಬಿ ತುಂಬಿ

ಕೊಡುವೆಯಾ ಜೀಯಾ? [೨] (ಕವಯಿತ್ರಿ)

---

೧) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ -೨೭

೨) ಛಾಯಾ ಭಗವತಿ : ಪುಟಾಣಿ ಕೆಂಪು ಶೂ - ೨೮

ಪ್ರೀತಿ ನೀಡುವಲ್ಲಿ ಆತ ಒಡೆಯ, ಅದನ್ನು ಪಡೆಯುವಲ್ಲಿ ಆಕೆ ದಾಸಿ. ಈ ಸಂಬಂಧ ಅತ್ಯಂತ ಆಪ್ತವಾದುದು. ಇದು ಪುರುಷನ ಒಲವಿಗೆ ದೊರೆತ ಬಹು ದೊಡ್ಡ ಸ್ಥಾನ. ಇದು ಗಂಡು-ಹೆಣ್ಣಿನ ಹೃದಯ ಸಂಬಂಧದ ಪ್ರತೀಕ. ಒಟ್ಟಾರೆ ಮಹಿಳಾ ಕಾವ್ಯಗಳು ಪ್ರೇಮಿ, ಗೆಳೆಯ ಆಗಿರುವ ತನ್ನ ಒಲವಿನ ಹುಡುಗನ ಬಗೆಗೆ ರಮ್ಯವಾಗಿ ಚಿತ್ರಿಸಿವೆ. ಇಲ್ಲಿ ಪುರುಷ ಅತ್ಯಂತ ಸಹೃದಯನಾಗಿ ಗೋಚರಿಸಿದ್ದಾನೆ. ಅವನು ಯಾವುದೇ ಕಪಟಗಳಿಲ್ಲದ ನಿಷ್ಕಲ್ಮಷ ಮನಸ್ಸಿನವನಾಗಿ ತೋರುತ್ತಾನೆ.

**ಆ. ಗಂಡ :-** ಮಹಿಳಾ ಕಾವ್ಯಗಳಲ್ಲಿ ಗಂಡನ ಬಗೆಗೆ ನೋಡುವಾಗ ಆತ ಪ್ರೇಮಿಗಿಂತ ತೀರಾ ಭಿನ್ನ. ಪ್ರೇಮಿಯ ಬಗೆಗಿನ ಒಲವು-ನಿಲುವುಗಳು ಗಂಡನಲ್ಲಿ ಕಾಣುವುದು ಅತ್ಯಂತ ಕಡಿಮೆ. ಇದಕ್ಕೆ ಕಾರಣ ಆತನೇ ಆಗಿದ್ದಾನೆ. ಗಂಡನೊಟ್ಟಿಗೆ ಒಲವಿಗಿಂತ ಯಾಂತ್ರಿಕತೆಯೇ ಪ್ರಧಾನವಾಗಿ ಗೋಚರಿಸುತ್ತದೆ. ಮಹಿಳಾ ಕಾವ್ಯಗಳಲ್ಲಿ ಇದುವರೆಗೂ ಮೌನವಾಗಿದ್ದ ಮಹಿಳೆಯರು ಮುಕ್ತವಾಗಿ ತಮ್ಮ ಮನಸ್ಸನ್ನು ತೆರೆದಿಟ್ಟಿದ್ದಾರೆ. ಶತಮಾನಗಳಿಂದ ಗಂಡನಿಂದ ಬರೀ ನೋವನ್ನೇ ಅನುಭವಿಸುತ್ತಾ ಬಂದ ಹೆಣ್ಣು ಇದೀಗ ಅವನ ಕುರಿತು ಮಾತನಾಡಲು ಶಕ್ತಳಾಗಿದ್ದಾಳೆ. ದಾಂಪತ್ಯದಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ ಅತ್ಯಗತ್ಯ. ಆದರೆ ಅಧಿಕಾರ, ಹಣವೇ ಪ್ರಧಾನವಾದಾಗ ಆ ದಾಂಪತ್ಯ ಮುರಿದು ಹೋಗುತ್ತದೆ. ಗಂಡಿನ ಬಗೆಗೆ ಜಿಗುಪ್ಸೆ ಮೂಡುತ್ತದೆ. ಇಂತಹ ಗಂಡನೊಟ್ಟಿಗೆ ಹೆಣ್ಣು ಸುಖವಾಗಿ ಬಾಳಲು ಸಾಧ್ಯವಿಲ್ಲ.

ಇಲ್ಲಿ ಗಂಡ ಹೆಂಡತಿಗೆ ಒಳ್ಳೆಯವನಾಗಿ, ಸಹೃದಯ ಪತಿಯಾಗಿ ಗೋಚರಿಸುವುದಿಲ್ಲ. ಹೆಂಡತಿಯನ್ನು ಭೋಗದ ವಸ್ತುವಾಗಿ, ತನ್ನ ಮಕ್ಕಳ ತಾಯಿಯಾಗಿ, ತನ್ನ ಸೇವಕಿಯನ್ನಾಗಿ ಮಾಡಿಕೊಳ್ಳುವ ಮೂಲಕ ಅವಳ ವ್ಯಕ್ತಿತ್ವವನ್ನೇ ಇಲ್ಲವಾಗಿಸಿದ್ದಾನೆ.

ನಗನಾಣ್ಯದ ಗಟ್ಟಿ ತಂದ

ಅವನ ವಾಸನೆಗಪ್ಪೇ

ಅದರಿಕೊಂಡ ದೇಹ

"ಅವನುತ್ತಿದ ಬೀಜದ ಅಂಕುರಕ್ಕೆ"

ಅವಳು ಬದುಕೇ ಇದ್ದಾಳೆ!

ಸಾವಿನ ವೆಚ್ಚ ಹೊತ್ತು ತಂದ

ಅವಧೂತನಾಗಿ

ಬದುಕುತ್ತಿದ್ದಾಳೆ.[೧] (ಸೊನ್ನೆ)

ಇಲ್ಲಿ ಗಂಡನಿಗೆ ಹಣವೇ ಪ್ರಧಾನ. ಹೆಂಡತಿ ಮಕ್ಕಳ ಹೆರುವ ಯಂತ್ರ. ಈ ರೀತಿಯ ದಾಂಪತ್ಯದಲ್ಲಿ ಗಂಡನಿಂದ ಹೆಣ್ಣಿಗೆ ಯಾವುದೇ ಸಂತೋಷ ಸಿಗಲು ಸಾಧ್ಯವಿಲ್ಲ. ಮದುವೆಯಾಗುವುದೇ ಹೆಣ್ಣಿನ ಮೇಲಿನ ಒಡವೆಗಳಿಗಾಗಿ ಎಂದಾಗ ಗಂಡು ತೀರಾ ಕೆಳಮಟ್ಟಕ್ಕಿಳಿಯುತ್ತಾನೆ.

ಮೈ ಮೇಲಿನ ಹೊನ್ನಿಗಲ್ಲದ

ಹೆಣ್ಣಿಗಲ್ಲ ಅವನು ಬದ್ಧ

ಯಾವುದೋ ಪಾಪಕ್ಕೆ ನೂರು ವರ್ಷ

ಸಂಸಾರ ಮಾಡಿದರೂ ಕನಸೊಂದನ್ನು

ಬಿತ್ತಿ ಬೆಳೆಯಲಾರದ ಬರಡು ಭೂಮಿ[೨] (ಮದುವೆ)

ಬದುಕಿನಲ್ಲಿ ಪ್ರೀತಿ, ಸ್ನೇಹಕ್ಕಿಂತ ಹಣವೇ ಮುಖ್ಯವಾದಾಗ ಮನುಷ್ಯ ಮೃಗವಾಗುತ್ತಾನೆ. ಪುರುಷ ತನ್ನ ಹೆಣ್ಣಿಗಿಂತ ಹೊನ್ನೇ ಮುಖ್ಯ ಎಂದಾಗ ಅವನೊಳಗಿನ ಈ ಮೃಗೀಯತೆ ಹೊರತೋರುತ್ತದೆ. ಇಲ್ಲಿ ಅವನು ಗಂಡನಾಗಿ ಉಳಿಯಲಾರ. ಹೆಂಡತಿಗೆ ತನ್ನಿಂದ ಯಾವ ಸಂತೋಷವನ್ನು ನೀಡಲಾರ ಹಾಗೂ ತಾನೂ ನೆಮ್ಮದಿಯಿಂದ ಬದುಕಲಾರ.

---

೧) ಡಿ ಬಿ ರಜಿಯ : ರಜಿಯಾ ಅವರ ಕವಿತೆಗಳು -೫೭

೨)ಎಂ ಎಸ್ ವೇದಾ : ಬಿಳಲುಗಳು - ೩೮

ರಾತ್ರಿ ಎಂದಿನಂತೆ

ನೆನಪುಗಳ ನಡುವೆ ಬಿಕ್ಕುತ್ತ

ನೋವುಗಳ ನಡುವೆ ಮಗ್ಗುಲು ಬದಲಿಸುತ್ತ

ಅವನ ಬಯಕೆಯ ಮುಳ್ಳುಗಳಿಗೆ

ಸೆರಗ ಹಾಸಿದರೂ, ನೆಮ್ಮದಿ ಕಳೆದುಕೊಳ್ಳುವ

ಅತೃಪ್ತ ಪುರುಷ ಮೃಗ[1] (ಈಗೇಕೆ ಹೀಗೆ)

ಪ್ರೀತಿ ಇಲ್ಲದ ದಾಂಪತ್ಯ ಕೇವಲ ದೇಹಗಳ ಸೇರುವಿಕೆಯೇ ಹೊರತು ಮನಸ್ಸುಗಳ ಮಿಲನವಾಗಲು ಎಂದಿಗೂ ಸಾಧ್ಯವಿಲ್ಲ. ಮದುವೆಯಾಗುವುದೇ ತನಗೊಬ್ಬ ಸೇವಕಿ ಬೇಕಾದ ಕಾರಣಕ್ಕೆ, ತನ್ನ ಮಕ್ಕಳನ್ನು ಪಾಲಿಸಲಿಕ್ಕೆ ಎಂದಾದಾಗ ಆ ಪುರುಷ ಹೆಣ್ಣಿನ ಪಾಲಿಗೆ ಕೇವಲ ಮೃಗವಾಗಿ ಗೋಚರಿಸುತ್ತಾನಷ್ಟೇ, ಮನುಷ್ಯನಾಗಿ ಅಲ್ಲ. ಇಂತಹ ವ್ಯಕ್ತಿತ್ವವುಳ್ಳ ಗಂಡನಿಂದ ಆಕೆ ಏನನ್ನೂ ಬಯಸಲು ಸಾಧ್ಯವಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಆತನಿಗೆ ತನ್ನ ವ್ಯಕ್ತಿತ್ವದ ಅರಿವು ಇರಬೇಕಾದುದು ಹಾಗೂ ಪತ್ನಿಯ ವ್ಯಕ್ತಿತ್ವಕ್ಕೂ ಗೌರವ ನೀಡುವುದು ಅತ್ಯಗತ್ಯ. ಇದ್ಯಾವುದೂ ಇಲ್ಲವೆಂದಾದಲ್ಲಿ ಹೆಂಡತಿಯಲ್ಲೂ ಅವನ ಬಗೆಗೆ ಗೌರವ ಉಳಿಯಲು ಸಾಧ್ಯವಿರುವುದಿಲ್ಲ.

ನನ್ನವರದು ಅಪ್ಪ ಅಮ್ಮನ

ಮಾತು ಮೀರದ ಭಕ್ತಿ

ನನ್ನ ವ್ಯಕ್ತಿತ್ವ ಗುರುತಿಸುವುದಿರಲಿ

ಅವರದನ್ನೇ ಇನ್ನೂ ಪತ್ತೆಹಚ್ಚದ ರೀತಿ[2] (ನಾನು)

---

೧) ಛಾಯಾ ಭಗವತಿ : ಪುಟಾಣಿ ಕೆಂಪು ಶೂ - ೨೨

೨) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೯-೧೦

ನನ್ನ ಬುದ್ಧಿ-ಕೌಶಲ್ಯ-ಪ್ರತಿಭೆಗಳೇನಿದ್ದರೂ

ನಿನ್ನ ಹೊಟ್ಟೆ ನೆತ್ತಿ ಜೋಪಾನ ಮಾಡುವಷ್ಟಕ್ಕೆ

ನನ್ನ ಅಂಗಾಂಗಗಳು ನಿನ್ನ ಇಂದ್ರಿಯಗಳಿಗೆ

ಸ್ಫೂರ್ತಿ-ಚೇತನ, ಖುಷಿ ನೀಡುವಷ್ಟಕ್ಕೆ

ಸೀಮಿತವೆಂದು ನಿರ್ಣಯಿಸಿರುವ ನಿನ್ನ

ಶತಮಾನಗಳ ಗೊಡ್ಡು ನಂಬಿಕೆಗೆ

'ಧಿಕ್ಕಾರ'ಕ್ಕಿಂತ ಮಿಗಿಲಾದ

ಶಕ್ತಿಯುತ ಶಬ್ದಕ್ಕಾಗಿ ಹುಡುಕುತ್ತಿದ್ದೇನೆ.[೧] (ಚಿಲ್ಲರೆಯಾಗುತ್ತಿದ್ದೇನೆ)

ತನ್ನ ಬೆಳವಣಿಗೆಯನ್ನೇ ಸ್ಥಗಿತಗೊಳಿಸಿ, ತನ್ನ ಪ್ರತಿಭೆಯನ್ನು ಕೇವಲ ಗಂಡನ ಹೊಟ್ಟೆ, ಬಟ್ಟೆ ಅಂಗಾಂಗಗಳ ಸುಖಕ್ಕಾಗಿ ಸೀಮಿತಗೊಳಿಸಿದ ಪುರುಷನ ಬಗೆಗೆ ಆಕ್ರೋಶವಿದೆ. ತನ್ನ ಈ ಸ್ಥಿತಿಯ ಬಗೆಗೆ ಅವಳ ಮನದಾಳದಲ್ಲಿ ವೇದನೆಯಿದೆ. ಅವಳ ಆಕ್ರೋಶ ಇಲ್ಲಿ ತೀವ್ರ ಸ್ವರೂಪವನ್ನು ಪಡೆದಿದೆ. ಗಂಡು ಇಲ್ಲಿ ಅವನ ಶತಮಾನಗಳ ಗೊಡ್ಡು ನಂಬಿಕೆಯ ಪ್ರತೀಕವಾಗಿದ್ದಾನೆ. ಅವನ ಎಲ್ಲ ಸ್ವೇಚ್ಛಾಚಾರಗಳ ವಿರುದ್ಧ ತಿರಸ್ಕಾರವಿದೆ. ಅಂತೆಯೇ ಒಂದು ಎಚ್ಚರಿಕೆಯೂ ಇದೆ.

ನಾ ಕಟ್ಟಿರುವ

ಬೇಲಿಯನು ಮುರಿದು

ಚೆಂದ ಕಂಡ ಸೀರೆ ಬ್ಲೌಸು ಬ್ರಾ

ಗಳಲಿ ಹೊಕ್ಕು ಕಾಪೇರಿ

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೧೧೪

ಉಬ್ಬು ತಗ್ಗುಗಳ ನೆಕ್ಕಿ ಕಣ್ಣಿಂದ

ಮಕರಂದ ಹೀರಿ ಸುಖಿಸಿ,

ಹಸನ್ಮುಖಿಸುವ ನಿನ್ನ ಡೊಂಕುಬಾಲದ

ಲೋಲತೆಗೆ ನಾನೂ

ಉತ್ತರಿಸಬೇಕಾದೀತು. . .

ನೀ ಕಟ್ಟಿರುವ ಬೇಲಿಯನು

ಮುರಿದೊಗೆದು. [೧] (ಆಕೆಯ ಎರಡು ಮಾತು)

ಗಂಡಸಿನ ಲೈಂಗಿಕ ಸ್ವೇಚ್ಛಾಚಾರದ ಕುರಿತು ಈ ಕವಿತೆ ದನಿ ಎತ್ತುತ್ತದೆ. ಹೆಣ್ಣಿಗೆ ಮಾತ್ರ ಬೇಲಿ, ಬಂಧನ. ಆದರೆ ಗಂಡು ಸ್ವತಂತ್ರ. ಇಂತಹ ನೀತಿಯನ್ನು ಅವನು ಹಾಕಿರುವ ಬೇಲಿಯನ್ನು ಮುರಿಯುವ ಮೂಲಕ ಖಂಡಿಸಲಾಗಿದೆ. ಗಂಡಿಗೊಂದು ಎಚ್ಚರಿಕೆ ನೀಡಲಾಗಿದೆ. ಗಂಡಿನ ಡೊಂಕು ಬಾಲದ ಲೋಲತೆಯ ಬಗೆಗೆ ತೀವ್ರ ಆಕ್ಷೇಪವಿದೆ. ಗಂಡನ ಈ ವಿಚಿತ್ರ, ಕೆಟ್ಟ ಗುಣಗಳಿಂದಾಚೆ ತನ್ನ ಗಂಡ ಹೇಗಿರಬೇಕೆಂದು ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿದ್ದಾಳೆ. ತಮ್ಮಿಬ್ಬರ ಬದುಕಿನ ಬಗೆಗೆ, ಗಂಡನೊಳಗಿನ ನಿಜವಾದ ಮನುಷ್ಯನ ಬಗೆಗೆ ತನ್ನ ಅಭಿಪ್ರಾಯವನ್ನು ಹಂಚಿಕೊಂಡಿದ್ದಾಳೆ. ಅಂತಹವನಿಗಾಗಿ ಆಕೆ ಹಂಬಲಿಸುತ್ತಾಳೆ.

ಗಂಡ ಸಿಗಬಹುದು, ಗಂಡು

ಸಿಗಬಹುದು, ಗಂಡನೊಳಗಿನ ಗಂಡು

ಹುಡುಗ ಬೇಕೆನಗೆ

ಹುಡುಕ ಬೇಕೆನಗೆ [೨] (ಗಂಡನೊಳಗಿನ ಗಂಡು ಹುಡುಗ)

---

೧) ಪೂರ್ವೋಕ್ತ - ೧೫೦

೨) ಹೇಮಾ : ವಿರಹೋತ್ಸವ -೪೭

ವಿವಾಹಕ್ಕೂ ಮುನ್ನ ಗೆಳೆಯನಾಗಿ ಪ್ರೀತಿಸುವ, ಸ್ಪಂದಿಸುವ ಹುಡುಗ ವಿವಾಹದ ನಂತರದಲ್ಲಿ ಇವ್ಯಾವುದೂ ಇಲ್ಲದ ಕೇವಲ 'ಗಂಡ'ನಾಗಿ ಮಾತ್ರ ಉಳಿದಿದ್ದಾನೆ. ದಿನವೂ ನವಚೇತನ ತರುತ್ತಿದ್ದ ಹುಡುಗ ಇಂದು ಗಂಡನಾದ ಕಾರಣ ಗುದ್ದಾಟಕ್ಕಿಳಿದಿದ್ದಾನೆ. ಹಾಗಾಗಿ ಹೆಣ್ಣು ತನ್ನ ಗಂಡನೊಳಗಿನ ಗೆಳೆಯನಿಗೆ, ಮೊದಲಿದ್ದ ಗಂಡು ಹುಡುಗನಿಗಾಗಿ ಹಂಬಲಿಸುತ್ತಾಳೆ. ಆ ಹುಡುಗ ಗಂಡನಲ್ಲಿ ಕಣ್ಮರೆಯಾಗಿದ್ದಾನೆ. ಗಂಡನಲ್ಲಿ ಇಂದು ಪ್ರೀತಿಗೆ ಬದಲಾಗಿ ಬರೀ ದರ್ಪ ಕಾಣುತ್ತಿದೆ.

ತಿರುಗಿ ನಾವಿಬ್ರೂ ಸಣ್ಣವ್ರಾಗಿ

ನಾ ಗುಬ್ಬೀ ಮನಿ ಕಟ್ಟೇನು

ನೀ ಬೇಲಿ ಕಟ್ಟೇನು

ನಾವಿಬ್ರೂ ಆ ಬೇಲಿ ಒಳಗಿನ

ಗುಬ್ಬೀಮನ್ಯಾಗ ಕುಂತು

ಬೆಚ್ಚಗೆ ಬೆಂಕಿ ಕಾಸಬೇಕೂ

ಅಂತ,

ಒಮ್ಮೇನೂ ನಿನಗೇನೂ

ಹಿಂಗ ಅನಸೂದಿಲ್ಲೇನ

ಮಾವಾ ?[೧] (ಗುಬ್ಬೀಮನಿ)

---

೧) ಸಂ. ಡಾ. ಎಂ ಎ ಜಯಚಂದ್ರ ಮತ್ತು ಇತರರು : ಆಧುನಿಕ ಕನ್ನಡ ಕವನಗಳು - ೧೨೬

ಹೆಣ್ಣಿಗೆ ಮಾತ್ರ ಈ ಸಮಾಜ ಬೇಲಿ ಹಾಕಿ ಬಂಧಿಸಿಡುತ್ತದೆ. ಗಂಡಿಗೆ ತನಗಿಷ್ಟ ಬಂದಂತೆ ಬದುಕಲು ಅವಕಾಶ ಮಾಡಿಕೊಟ್ಟಿದೆ. ಈ ನೀತಿಯ ವಿರುದ್ಧ ಇಲ್ಲಿ ಕವಯಿತ್ರಿ ಇಬ್ಬರ ಬದುಕಿಗೂ ಒಂದು ಚೌಕಟ್ಟು ಇರಬೇಕೆಂದು ಆಶಿಸುತ್ತಾರೆ. ಈ ಮೂಲಕ ಇಲ್ಲೊಂದು ವಿಭಿನ್ನ ಆಶಯವಿದೆ.

ಹೀಗೆ ಗಂಡನ ಬಗೆಗೆ ಮಹಿಳಾ ಕಾವ್ಯಗಳು ತಮ್ಮ ದೃಷ್ಟಿಕೋನವನ್ನು ಮುಕ್ತವಾಗಿ ಹೊರಚೆಲ್ಲಿವೆ. ಗೆಳೆಯನಿಗಿಂತ ಗಂಡ ತೀರಾ ಭಿನ್ನವಾಗಿದ್ದಾನೆ. ಗಂಡನಲ್ಲಿ ಹೆಚ್ಚಾಗಿ ಅಧಿಕಾರಸ್ಥ ನೆಲೆ ಕಂಡುಬಂದರೆ, ಗೆಳೆಯನಲ್ಲಿ ಪ್ರೀತಿ ಹೆಚ್ಚಾಗಿ ಕಂಡುಬರುತ್ತದೆ. ಗೆಳೆಯನಲ್ಲಿ ಇರುವ ಸಲುಗೆ ಗಂಡನಲ್ಲಿ ಕಾಣಲು ಸಾಧ್ಯವಿಲ್ಲ. ಕಾರಣ ಪ್ರೇಮಿ ಪ್ರೀತಿಯ ಕೇಂದ್ರ, ಗಂಡ ಅಧಿಕಾರದ ಕೇಂದ್ರ. ಗಂಡ ಹೆಂಡತಿಗೆ ಮಾತ್ರ ಬೇಲಿಯೊಳಗೆ ಬಂಧಿಸಿ ತಾನು ಮಾತ್ರ ಸ್ವೇಚ್ಛೆಯಾಗಿ ಬದುಕನ್ನು ಅನುಭವಿಸುತ್ತಾನೆ. ಗೆಳೆಯ ಮನಸ್ಸಿಗೆ ಸ್ಪಂದಿಸಿದರೆ, ಗಂಡ ಹೆಂಡತಿಯ ದೇಹಕ್ಕೆ ಮಾತ್ರ ಪ್ರಾಮುಖ್ಯತೆ ನೀಡುವವನಾಗಿದ್ದಾನೆ. ಗೆಳೆಯನಲ್ಲಿನ ಮುಗ್ಧ ಪ್ರೀತಿಯನ್ನು ಗಂಡನ ದರ್ಪ ನುಂಗಿಹಾಕುತ್ತದೆ. ಹೀಗಾಗಿ ಹೆಚ್ಚಾಗಿ ಮಹಿಳೆಯರು ಬಯಸುವುದು ಗೆಳೆಯನನ್ನೇ ಹೊರತು ಗಂಡನನ್ನಲ್ಲ. ಗಂಡನೊಳಗಿನ ಗೆಳೆಯನಿಗಾಗಿ ಹಂಬಲಿಸುವುದು ಹೆಚ್ಚು ಕಂಡು ಬರುತ್ತದೆ. ಹಾಗೆಯೇ ಗಂಡನ ದರ್ಪ, ದೌರ್ಜನ್ಯಗಳ ವಿರುದ್ಧ ಪ್ರತಿಭಟನೆಯೂ, ಎಚ್ಚರಿಕೆಯೂ ಇಲ್ಲಿದೆ.

**೩. ಒಟ್ಟು ಪುರುಷ ಸಮುದಾಯ :-** ಸಾಮಾಜಿಕ ಜೀವನದಲ್ಲಿ ಒಟ್ಟಾರೆ ಪುರುಷ ವರ್ಗವನ್ನು ಕುರಿತು ಮಹಿಳಾ ಕಾವ್ಯಗಳು ತಾಳಿರುವ ನಿಲುವನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಪುರುಷ ಸಮುದಾಯವನ್ನು ಕುರಿತು, ಅವರ ಪಾತ್ರವನ್ನು ಕುರಿತು ಚಿಂತಿಸಲಾಗಿದೆ. ಒಟ್ಟು ದೃಷ್ಟಿಯಿಂದ ಈ ಪುರುಷ ಸಮುದಾಯವನ್ನು ನೋಡಿದಾಗ ಅಲ್ಲಿ ಅತಿ ಹೆಚ್ಚು ಕಂಡು ಬರುವುದು ಹೆಣ್ಣಿನ ಮೇಲೆ ಅವರು ನಡೆಸಿದ ದೌರ್ಜನ್ಯ, ಶೋಷಣೆ, ಹಿಂಸೆ, ಕ್ರೌರ್ಯ, ಕಾಮಪಿಪಾಸುತನ, ಅನ್ಯಾಯ ಇಂತಹವೇ. ಇದು ಇಂದು ನಿನ್ನೆಯ ವಿಚಾರವಲ್ಲ. ಹಲವು ಶತಮಾನಗಳ ಇತಿಹಾಸವೇ ಇದಕ್ಕಿದೆ. ಪುರಾಣಗಳ ಕಾಲದಿಂದಲೂ ಗಂಡು ತನ್ನ ಅಧಿಕಾರ ಸ್ಥಾಪನೆಯ ಹುನ್ನಾರದಿಂದ ಹೆಣ್ಣನ್ನು ಕೀಳದರ್ಜೆಯವಳಂತೆ ಕಂಡಿದ್ದಾನೆ. ಮಹಿಳಾ ಕಾವ್ಯಗಳಲ್ಲಿ ಈ ಎಲ್ಲವೂ ಚರ್ಚೆಗೆ ಗ್ರಾಸವಾಗಿದೆ ಹಾಗೂ ಇದರ ಬಗೆಗೆ ತೀವ್ರ ವಿರೋಧವೂ ಇದೆ.

ನಮ್ಮ ಇತಿಹಾಸ, ಪುರಾಣ ಎಲ್ಲೇ ನೋಡಿದರೂ ಅಲ್ಲಿ ಹೆಣ್ಣಿಗಾಗಿ ಗಂಡು ನಡೆಸಿದ, ಹೆಣ್ಣಿನ ಮೇಲೆ ನಡೆಸಿದ ದೌರ್ಜನ್ಯ, ದಾಳಿಗಳೇ ಎದ್ದು ಕಾಣುತ್ತವೆ. ಹೆಣ್ಣನ್ನು ಪಡೆಯಲು ಯುದ್ಧಗಳನ್ನೇ ಮಾಡಿ ಹಲವು ಜನರ ಮಾನ, ಪ್ರಾಣಗಳಿಗೆ

ಹಾನಿಯಾದವು. ವಿಶ್ವದಲ್ಲಿ ನಡೆದಿರುವ ಎಷ್ಟೋ ಯುದ್ಧಗಳು ಹೆಣ್ಣನ್ನು ಗೆಲ್ಲುವುದಕ್ಕಾಗಿಯೇ ಆಗಿವೆ. ದ್ರೌಪದಿಗಾಗಿ ಭಾರತ, ಸೀತೆಗಾಗಿ ರಾಮಾಯಣ ನಡೆಯಿತು. ಹೆಣ್ಣೇ ಈ ಯುದ್ಧದ ಕೇಂದ್ರ. ಹೆಣ್ಣನ್ನು ಬಯಸಿ ಗಂಡು ಎಷ್ಟೆಷ್ಟೋ ಭೀಕರ ಯುದ್ಧಗಳನ್ನೇ ಮಾಡಿ ಮುಗಿಸಿದ.

ಯಾವ ಹೆಣ್ಣು ಗಂಡನ್ನು

ಬಯಸಿ ಯುದ್ಧ ಸಾರಿದ್ದಿಲ್ಲ

ಅಲ್ಲೊಬ್ಬ ಇಲ್ಲೊಬ್ಬ

ಅಂಬೆ ರಂಭೆಯರ ಕತೆಯನ್ನೇ

ಹಿಗ್ಗಾ ಮುಗ್ಗಾ ಜಗ್ಗುತ್ತಿದ್ದಾರೆ.

ಒಂದು ಹೆಣ್ಣಿನ

ಮೂಗಿಗಿರುವಷ್ಟು ಬೆಲೆ

ಎಷ್ಟೋ ಅರಸರ

ತಲೆಗಳಿಗಿರಲಿಲ್ಲ![೧] (ಸ್ಥಿತಿ-ಗತಿ)

ಒಬ್ಬ ಹೆಣ್ಣಿಗಾಗಿ ಅದೆಷ್ಟೋ ಜನ ಅರಸರ ತಲೆಗಳುರುಳಿವೆ. ಆದರೆ ಹೀಗೆ ಹೋದೆಡೆ ಬಂದೆಡೆ ಗೆದ್ದ ಹೆಣ್ಣುಮಕ್ಕಳನ್ನು ತಮ್ಮ ಸ್ವಾರ್ಥ ಲಾಲಸೆಗೆ ಬಳಸಿಕೊಂಡು ಬಿಟ್ಟು ಬಿಡುವುದಷ್ಟೇ ಗೊತ್ತು ಈ ಮರುಷರಿಗೆ. ನಂತರದಲ್ಲಿ ಆ ಹೆಣ್ಣು ಮಕ್ಕಳ ಸ್ಥಿತಿಯ ಬಗೆಗೆ ತಲೆಕೆಡಿಸಿಕೊಳ್ಳುವ ಅಗತ್ಯ ಈ ಮಹಾಶಯರಿಗಿರುವುದಿಲ್ಲ. ನಂತರದಲ್ಲಿ ವೇಶ್ಯೆಯರಾಗಿ ಈ ಹೆಣ್ಣುಮಕ್ಕಳು ಮತ್ತೊಂದು ಭೀಕರ ಕ್ರೂರತ್ವಕ್ಕೆ ಎಂತಹ ಶಿಕ್ಷೆ ನೀಡಿದರೂ ಕಡಿಮೆಯೇ.

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೨೫೦

ಶತಶತಮಾನಗಳಿಂದ ಪುರುಷ ಹೆಣ್ಣನ್ನು ಅಧೀನಳಾಗಿ, ಕೆಳದರ್ಜೆಯವಳಂತೆಯೇ ನಡೆಸಿಕೊಳ್ಳುತ್ತಾ ಬಂದಿದ್ದಾನೆ. ಅವಳ ಸ್ವಾತಂತ್ರ್ಯವನ್ನು ಕಸಿದುಕೊಂಡು ತನ್ನ ದಾಸಿಯನ್ನಾಗಿ ಮಾಡಿಕೊಂಡಿದ್ದಾನೆ. ಅದನ್ನು ಆಕೆ ಪ್ರಶ್ನಿಸುವುದಿರಲಿ ಅದರ ಬಗೆಗೆ ಉಸಿರೆತ್ತುವುದೂ ಸಾಧ್ಯವಿರಲಿಲ್ಲ.

ನಿನ್ನಾಸ್ತಿಯಲ್ಲಿ

ನಾನೊಂದು ನಿರ್ಜೀವ

ವಸ್ತುವಾಗಿ ಮಾತ್ರ

ಇಂದಿಗೂ ಉಳಿದುಕೊಂಡಿದ್ದೇನೆ,

ಆಗೀಗ ಮಿಸುಕಾಡಲೆತ್ನಿಸುವ ನನ್ನ

ಮೆತ್ತಗೆ ಕತ್ತು ಹಿಸುಕುತ್ತಲೇ ಇರುವಿ,

ಎಷ್ಟೆಂದರೂ ನೀನು

ಗಂಡೇ ತಾನೆ? ೧ (ಸಮಾನತೆ)

ಸಮಾನತೆ ಎಂಬುದು ಈ ಇಪ್ಪತ್ತೊಂದನೇ ಶತಮಾನದಲ್ಲೂ ಪ್ರಶ್ನೆಯಾಗೇ ಉಳಿದಿದೆ. ಹೆಣ್ಣು ಇಂದಿಗೂ ಗಂಡಿನ ಆಸ್ತಿ. ಅವಳು ಸ್ವಲ್ಪ ಸ್ವಾತಂತ್ರ್ಯ ಬಯಸಿದರೂ ಅವಳನ್ನು ಹಿಂಸಿಸುವ ಪೈಶಾಚಿಕತೆಗೆ ಗಂಡು ಇಳಿಯುತ್ತಾನೆ. ಕಾರಣ ಆತ 'ಗಂಡು' ಎಂಬ ಅಹಂ. ಇಂತಹ ಪುರುಷರು ಹೆಣ್ಣಿನ ಮನದ ಸೂಕ್ಷ್ಮಗಳನ್ನು ಅರ್ಥೈಸಿಕೊಳ್ಳುವುದೇ ಇಲ್ಲ.

ಮನಸಿನೊಳಗಡೆ ಎಂದೂ

ಇಣುಕಲಾರಿರಿ ಏನನೂ

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೦೧

ಇಣುಕಲಾದರೂ ಹಾಗೆ ಮಾಡಲಾಗದು ನೀವು

ಚೀಲದೊಳಗಿನ ತಿರುಳನು

ಹುಡುಕಿ ತೆಗೆಯಲಾದರೂ ಹಾಗೆ

ಮಾಡಲಾಗದು ನೀವು

ನೋಡಬಾರದು ಚೀಲದೊಳಗನು [1]                (ನೋಡಬಾರದು ಚೀಲದೊಳಗನು)

ಪುರುಷರಿಗೆ ಹೆಣ್ಣಿನ ಮನೋಲೋಕದ ಸಂಪೂರ್ಣ ಅರಿವು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಅವರು ಯತ್ನಿಸುವುದೂ ಇಲ್ಲ. ಹೀಗಾಗಿ ಅವಳಿಗೆ ಸ್ಪಂದಿಸುವ ಮನೋಭಾವ ಅವರಲ್ಲಿ ಕಡಿಮೆ. ಅದರ ಬದಲಾಗಿ ದೌರ್ಜನ್ಯ ಹೆಚ್ಚು ಆದರೆ ಅದನ್ನು ಸಹಿಸುತ್ತಲೇ ಇರುವ, ಇರಬೇಕಾದ ಪರಿಸ್ಥಿತಿ ಇಂದು ಹೆಣ್ಣಿಗಿಲ್ಲ. ತಾಳ್ಮೆಗೂ ಒಂದು ಮಿತಿ ಇದೆ. ಆ ಮಿತಿ ದಾಟಿದ ನಂತರ ಅದು ಸ್ಫೋಟಗೊಳ್ಳುತ್ತದೆ. ಇದುವರೆಗೂ ಗಂಡಿನ ದಬ್ಬಾಳಿಕೆಯನ್ನು, ಶೋಷಣೆಯನ್ನು ಸಹಿಸಿದ ಹೆಣ್ಣು ಇದೀಗ ಅವನ ಅವನ ವಿರುದ್ಧ ತಿರುಗಿ ಬಿದ್ದಿದ್ದಾಳೆ.

ನಾನು ತಾಯಿಯಲ್ಲ

ನಾನು ಹೆಂಡತಿಯಲ್ಲ

ನಾನು ಮಗಳಲ್ಲ

ತೊಲಗಾಚೆ

ಇನ್ನು ನಾ ನಿನ್ನ

ಪೊರೆವಳಲ್ಲ... [2]                (ಬೀಜಯಜ್ಞ)

---

೧) ವೈದೇಹಿ ಅವರ ಆಯ್ದ ಕವಿತೆಗಳು - ೨೮

೨) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂಗಳು - ೧೮೪

ಇಷ್ಟುದಿನ ಅವನಿಗೆ ತಾಯಿ, ಹೆಂಡತಿ, ಮಗಳಾಗಿ ಹೊರೆದದ್ದು ಅವಳಿಗಿನ್ನು ಸಾಕಾಗಿದೆ. ಅವನ ವಿರುದ್ಧ ತನಗೆ ಮಾಡಿದ ಅನ್ಯಾಯದ ಬಗೆಗೆ ತೀವ್ರ ಅಸಹನೆಯಿದೆ.

'ಚಂಡಿ ಚಾಮುಂಡಿ ನಾನ್'

ಗಂಡುಸೆ ಪಿಡಿದು ಚೆಂಡಾಡುವೆ ಕೇಳ್! [1] (ಬೀಜಯಜ್ಞ)

ಗಂಡನ್ನು ಚಾಮುಂಡಿಯಂತೆ ಚೆಂಡಾಡುವಷ್ಟು ಅವಳ ಆಕ್ರೋಶ ಮುಗಿಲು ಮುಟ್ಟಿದೆ. ಅವರ ಈ ಕ್ರೂರ ವರ್ತನೆಗಳು ಇಂದು ನಿನ್ನೆಯದಲ್ಲ. ಅವರ ಲಂಪಟತನ, ಅಹಂಕಾರ, ನಾಟಕೀಯತೆ, ಅನ್ಯಾಯ ಈ ಎಲ್ಲವುಗಳ, ಅಹಂಕಾರ, ನಾಟಕೀಯತೆ, ಅನ್ಯಾಯ ಈ ಎಲ್ಲವುಗಳ ಪರಿಚಯ ಹೆಣ್ಣಿಗಿಂತ ಎಲ್ಲದರಲ್ಲೂ ಭಿನ್ನವಾದ ಇಂತಹ ಪುರುಷನ ವ್ಯಕ್ತಿತ್ವದ ಬಗೆಗೆ ಕಾವ್ಯಗಳಲ್ಲಿ ವ್ಯಂಗ್ಯವಿದೆ.

ನಾವು ಗಂಡಸರಲ್ಲ

ಎಲ್ಲಿ ಹೋದರೂ ಹುಡುಗಿರನ್ನು ಕಂಡಾಗ

ಕಣ್ಣು ಮಿಟುಕಿಸಿ ವಕ್ರನಗೆ ಬೀರುವವರಲ್ಲ.

ದುಂಡಗಿನ ಹೆಂಗಸಿರೊಡನೆ ಮಾತನಾಡುವ

ಮಿತಿ ಮೀರಿ ಮರ್ಯಾದೆ ತೋರಿದರೂ

ಮನಸ್ಸಿನಲ್ಲೇ ಅವರನ್ನು ಬೆತ್ತಲಾಗಿಸುವವರಲ್ಲ.

ಒಳಗೊಳಗೆ ಗಡಗಡನೆ ನಡುಗುತ್ತಿದ್ದರೂ

ಮೇಲೆ ಪೌರುಷತ್ವದ ಶಾಲು ಹೊದೆದು ಬೀಗುವವರಲ್ಲ. [2] (ನಾವು)

---

೧) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂಗಳು - ೧೯೫

೨) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೧೧

ಹೆಣ್ಣನ್ನು ಕೇವಲ ಕಾಮುಕ ಕಣ್ಣಿಂದ ನೋಡುವ ಪುರುಷರನ್ನು, ಹೆಂಡತಿಯನ್ನು ಕಸದಂತೆ ಮೂಲೆಗೆ ಸರಿಸುವ ಇವರನ್ನು, ಅಧೈರ್ಯದಲ್ಲೂ ಬಹಳ ಧೈರ್ಯವಂತನಂತೆ ಪೋಸು ನೀಡುವ ಈ ಗಂಡಸರನ್ನು ಕುರಿತು ಇಲ್ಲಿ ವ್ಯಂಗ್ಯವಿದೆ. ಇಂತಹ ಗಂಡಸರ ವಿರುದ್ಧ ಹಲವಾರು ದನಿಗಳು ಎದ್ದಿವೆ. ಆದರೂ ಎಲ್ಲೋ ಇವರು ಬದಲಾದರೆ ಎಲ್ಲರೂ ಒಟ್ಟಿಗೆ ಬಾಳಬಹುದು ಎಂಬ ಸದಾಶಯವೂ ಮಹಿಳಾ ಮಹಿಳಾ ಕಾವ್ಯಗಳಲ್ಲಿ. ಆದರೆ ಈ ಬದಲಾವಣೆ ಸಾಧ್ಯವಿಲ್ಲ ಎನ್ನುವುದಾದರೆ ಅದರ ವಿರುದ್ಧ ಸಿಡಿದೇಳಲು, ಪ್ರತಿಭಟಿಸಲು ಮಹಿಳೆಯರು ಸಿದ್ಧರಿದ್ದಾರೆ.

ವಿಕೃತ ಭಾವವ ತೊರೆದವರಾದರೆ

ಕೀಳು ಕಾಮನೆಯ ಬಿಟ್ಟವರಾದರೆ

ಅಂಗದ ಗುಂಗನು ತೊರೆಯುವರಾದರೆ

ಬನ್ನಿ ನಾವು ನೀವು ಪ್ರೀತಿಸುವ

ಹಾಗಲ್ಲದೆ-

ಕೇವಲ ಸೆಕ್ಸೆಂದೆಣಿಸುವಿರಾದರೆ

ಸಂಯಮ ಗಾಳಿಲಿ ತೂರುವಿರಾದರೆ

ಆಗ

ರಣ ಚಂಡಿ ಚಾಮುಂಡಿಯರು ನಾವು! [1] (ಪ್ರೀತಿಸುವ ಬನ್ನಿ)

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೧೭೪

ಗಂಡಿನ ಈ ಅಸಭ್ಯ ವರ್ತನೆಯನ್ನು ತೀವ್ರವಾಗಿ ಖಂಡಿಸಲಾಗಿದೆ. ಇಲ್ಲೆಲ್ಲಾ ಗಂಡು ಹೆಣ್ಣಿನ ಬಗೆಗೆ ಗೌರವವಿಲ್ಲದ, ಕೇವಲ ಕಾಮುಕ ದೃಷ್ಟಿಯುಳ್ಳವನಾಗಿದ್ದಾನೆ. ಒಟ್ಟು ಈ ಪುರುಷರ ಬಗೆಗೆ ವಿವೇಚಿಸಿದಾಗ ಹೆಚ್ಚಿನ ಸಂಖ್ಯೆಯ ಪುರುಷರು ಈ ರೀತಿಯ ಶೋಷಣೆ, ಅನ್ಯಾಯ, ದೌರ್ಜನ್ಯಗಳಲ್ಲಿ ತೊಡಗಿದವರೇ ಆಗಿದ್ದಾರೆ. ಇಂತಹ ಗಂಡಸರನ್ನು ಕುರಿತು ಮಹಿಳಾ ಕಾವ್ಯಗಳು ತಮ್ಮ ವಿರೋಧವನ್ನು ವ್ಯಕ್ತಪಡಿಸುತ್ತವೆ.

ಅಯ್ಯೋ ನನಗನ್ನಿಸುತ್ತದೆ

ಹಂಗೊಮ್ಮೆ, ಹಿಂಗೊಮ್ಮೆ

ಹೆಣ್ಣ ಬುಗುರಿಯಾಡ ಬಯಸುವ

ಇವುಗಳ ಕುಂಡಿಗೆ

ಒಮ್ಮೆಯಾದರೂ ಜಾಡಿಸಿ ಒದೀಬೇಕು. [೧] (ಸರ್ವಮಂಗಳ - ಭಂಡರು)

ಮಾತಿನಲ್ಲೇ ಮೋಡಿ ಮಾಡಿ ಅವರ ಹಿಂದೆ ವಿಕೃತ ಮನಸ್ಸಿನ ಲೆಕ್ಕಾಚಾರ ಹಾಕುವ, ಹೆಣ್ಣನ್ನು ಗೌರವಿಸುವಂತೆ ಕೇವಲ ನಟಿಸುವ ಈ ಗಂಡಸರ ಬಗೆಗೆ ಧಿಕ್ಕಾರವಿದೆ. ಹೆಣ್ಣನ್ನು ಲೈಂಗಿಕ ದೃಷ್ಟಿಯಿಂದ ಮಾತ್ರ ನೋಡುವ ಇಂತಹ ಗಂಡಸರಿಗೆ ಒಮ್ಮೆಯಾದರೂ ಜಾಡಿಸಿ ಒದ್ದು ಬುದ್ಧಿ ಹೇಳುವ ಕಾತರ ಇಲ್ಲಿದೆ. ಇದರ ಹಿಂದೆ ಮಹಿಳೆಯರಲ್ಲಿ ಅಡಗಿರುವ ನೋವಿನ ಅಗಾಧತೆ ಎದ್ದು ಕಾಣುತ್ತದೆ. ಒಟ್ಟಾರೆಯಾಗಿ ಒಟ್ಟು ಪುರುಷ ಸಮುದಾಯದ ಬಗೆಗೆ ಮಹಿಳೆಯರಲ್ಲಿ ಅಸಮಾಧಾನವಿದೆ. ಅವರ ನೀಚ ಕಾರ್ಯಗಳ ಬಗೆಗೆ ಆಕ್ಷೇಪವಿದೆ. ಇಲ್ಲಿ ಪುರುಷರು ತಮ್ಮ ಈ ಕೆಳಮಟ್ಟದ ಚಿಂತನೆ, ವರ್ತನೆಗಳಿಂದ ಹೆಣ್ಣಿನ ದೃಷ್ಟಿಯಲ್ಲಿ ಅತ್ಯಂತ ಸಣ್ಣವರಾಗಿದ್ದಾರೆ.

---

೧) ಪ್ರ. ಸಂ. ಹಂಪ ನಾಗರಾಜಯ್ಯ : ಹೊಸಗನ್ನಡ ಕವಿತೆ - ೪೧೩

ಒಟ್ಟಾರೆಯಾಗಿ ಮಹಿಳಾ ಕಾವ್ಯಗಳಲ್ಲಿ ಪುರುಷನ ಬಗೆಗೆ, ಅವನ ವಿವಿಧ ಪಾತ್ರಗಳ ಬಗೆಗೆ ಚರ್ಚಿಸಲಾಗಿದೆ. ಪುರಾಣ ಹಾಗೂ ಸಾಮಾಜಿಕ ಎರಡೂ ರೀತಿಯಲ್ಲಿ ನೋಡಿದಾಗಲೂ ಪುರುಷರ ಚಿಂತನೆಯಲ್ಲಿ ಯಾವುದೇ ಭಿನ್ನತೆಗಳಿಲ್ಲ. ಅಲ್ಲೂ ಪುರುಷ ಒಂದಲ್ಲಾ ಒಂದು ಬಗೆಯಲ್ಲಿ ಹೆಣ್ಣನ್ನು ವಂಚಿಸುವವನೇ, ಇಲ್ಲೂ ವಂಚಿಸುವವನೇ. ಸಾಮಾಜಿಕ ಬದುಕಿನಲ್ಲಿ ಪುರುಷ ಮಹಿಳೆಯೊಟ್ಟಿಗೆ ಬದುಕುವಾಗ ಅವನ ನಿಷ್ಠೆ, ಪ್ರಾಮಾಣಿಕತೆಯ ಆಧಾರದ ಮೇಲೆ ಅವನ ಪಾತ್ರಗಳಲ್ಲೂ ಭಿನ್ನತೆ ತೋರುತ್ತದೆ. ಹಾಗಾಗಿ ಗೆಳೆಯನಾಗಿ, ಪತಿಯಾಗಿ ಒಟ್ಟು ಪುರುಷ ಸಮುದಾಯದಲ್ಲೊಬ್ಬನಾಗಿ ಭಿನ್ನವಾಗುತ್ತಾ ಹೋಗುತ್ತಾನೆ. ಒಟ್ಟು ಮಹಿಳಾ ಕಾವ್ಯಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಹೆಣ್ಣಿಗೆ ತನ್ನ ಗೆಳೆಯನ, ಪ್ರೇಮಿಯ ಒಡನಾಟವೇ ಅತಿ ಹೆಚ್ಚು ಸುಖ, ಸಂತೋಷವನ್ನು ನೀಡುವಂತದ್ದಾಗಿದೆ. ಹೀಗಾಗಿ ಇಲ್ಲಿ ಗೆಳೆಯ ಮಹಿಳೆಗೆ ಹೆಚ್ಚು ಆಪ್ತನೆನಿಸುತ್ತಾನೆ. ಗೆಳೆಯನಲ್ಲಿದ್ದ ನಿಷ್ಕಲ್ಮಷ ಮನಸ್ಸು ಗಂಡನಾದ ನಂತರ ಅಧಿಕಾರ ಸ್ಥಾಪನೆಯ ಹಂಬಲದ ಕಾರಣವಾಗಿ ಕಲುಷಿತಗೊಳ್ಳುತ್ತದೆ.

ಒಟ್ಟು ಪುರುಷ ಸಮುದಾಯದ ಬಗೆಗೆ ಮಹಿಳೆಯರು ಗಟ್ಟಿದನಿ ಎತ್ತಿದ್ದಾರೆ. ಇಲ್ಲಿ ಪುರುಷರು ನೇತ್ಯಾತ್ಮಕವಾಗಿಯೇ ಗುರುತಿಸಲ್ಪಡುತ್ತಾರೆ. ಅವರ ಇತ್ಯಾತ್ಮಕತೆಯೇ ಇಲ್ಲಿ ಅಗೋಚರ. ಪುರಾಣ ಪುರುಷ ಪಾತ್ರಗಳು ಇದಕ್ಕಿಂತ ಭಿನ್ನವೇನಲ್ಲ. ಅಲ್ಲೂ ಅಧಿಕಾರ, ದರ್ಪ, ಅಹಂ ಎಲ್ಲವೂ ಇದೆ. ಆದರೆ ಅಲ್ಲಿ ಪುರುಷರ ವಿರುದ್ಧ ಬಂದಿದ್ದು ಮೌನ ಪ್ರತಿಭಟನೆ. ಇಲ್ಲಿ ಸಾಮಾಜಿಕ ಪಾತ್ರಗಳ ಬಗ್ಗೆ ತೋರಿದ್ದು ತೀವ್ರ ಸ್ವರೂಪದ ಪ್ರತಿಭಟನೆ. ಆದರೆ ಇಂದಿಗೂ ಪುರುಷ ಮುಂಚಿನಂತೆಯೇ ಇದ್ದಾನೆ. ಬದಲಾವಣೆಯ ಪ್ರಮಾಣ ತೀರಾ ಕಡಿಮೆ.

ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗೆ ಅತ್ಯಂತ ಗೌರವದ ಸ್ಥಾನವನ್ನು ನೀಡಲಾಗಿದೆಯಾದರೂ ಅವಳ ಶೋಷಣೆ ಮಾತ್ರ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಇದು ಕೌಟುಂಬಿಕ ಕ್ಷೇತ್ರದಲ್ಲಾಗಿರಬಹುದು ಇಲ್ಲವೇ ಸಾಮಾಜಿಕ ಕ್ಷೇತ್ರದಲ್ಲಾಗಿರಬಹುದು. ಇಲ್ಲಿ ಪುರುಷ ಶೋಷಕ ನೆಲೆಯಲ್ಲಿಯೂ, ಸ್ತ್ರೀ ಶೋಷಿತ ನೆಲೆಯಲ್ಲಿಯೂ ಕಂಡುಬರುತ್ತಾರೆ. ಆದರೆ ಸ್ತ್ರೀಯರು ಇದರ ಬಗೆಗೆ ದನಿ ಎತ್ತಿದ್ದು ಕಡಿಮೆ. ತೀರಾ ಇತ್ತೀಚೆಗೆ ಸ್ತ್ರೀಯರು ಇದರ ಬಗ್ಗೆ ಎಚ್ಚೆತ್ತು ಹೋರಾಟಕ್ಕಿಳಿಯುತ್ತಿದ್ದಾರೆ. ಬರವಣಿಗೆಯನ್ನು ತಮ್ಮ ಪ್ರಮುಖ ಅಸ್ತ್ರವನ್ನಾಗಿಸಿಕೊಂಡಿದ್ದಾರೆ. ಮಹಿಳಾ ಕಾವ್ಯಗಳು ಈ ದಿಸೆಯಲ್ಲಿ ಅತ್ಯಂತ ಮಹತ್ವದವಾಗಿವೆ. ಮಹಿಳೆಯರು ಕಾವ್ಯಗಳಲ್ಲಿ ತಮ್ಮ ನೋವು-ನಲಿವುಗಳನ್ನು ಮುಕ್ತವಾಗಿ ತೆರೆದಿಟ್ಟಿದ್ದಾರೆ. ಇದಕ್ಕೆ ಕಾರಣರಾದ ಪುರುಷರ ಬಗೆಗೆ ಮಹಿಳೆಯರು ತಮ್ಮ ಒಲವು-ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ಈ ನಿಟ್ಟಿನಲ್ಲಿ ಮಹಿಳಾ ಕಾವ್ಯಗಳಲ್ಲಿ ವ್ಯಕ್ತವಾಗಿರುವ ಸ್ತ್ರೀ-ಪುರುಷ ಸಂಬಂಧದ ಸ್ವರೂಪವನ್ನು ಅರ್ಥೈಸಿಕೊಳ್ಳಬೇಕಾಗಿದೆ.

ಸ್ತ್ರೀ-ಪುರುಷರಿಬ್ಬರೂ ಬದುಕಿನಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸುತ್ತಾ ಸಾಗುತ್ತಾರೆ. ತಂದೆ-ತಾಯಿ, ಪತಿ-ಪತ್ನಿ, ಮಗ-ಮಗಳು, ಸಹೋದರ-ಸಹೋದರಿ ಇತ್ಯಾದಿ ಸಂಬಂಧಗಳ ನಿರ್ವಹಣೆ ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲೂ ಅನಿವಾರ್ಯವಾಗಿ ಬಂದೇ ಬರುತ್ತದೆ. ಈ ಎಲ್ಲಾ ಪಾತ್ರಗಳನ್ನು ನಿರ್ವಹಿಸುವ ಸಂದರ್ಭದಲ್ಲಿ ಇವರ ನಡುವಿನ ಸಂಬಂಧವು ಎಂತದ್ದು, ಅದರ ಸ್ವರೂಪ ಏನು ಎಂಬುದನ್ನು ಮಹಿಳಾ ಕಾವ್ಯಗಳ ಮೂಲಕ ಅರ್ಥೈಸಲಾಗಿದೆ. ಸ್ತ್ರೀ-ಪುರುಷ ಸಂಬಂಧವನ್ನು ಇಲ್ಲಿ ಮುಖ್ಯವಾಗಿ ದಾಂಪತ್ಯ, ಪ್ರೇಮ ಹಾಗೂ ಇತರೆ ಸಂಬಂಧಗಳೆಂದು ವಿಭಾಗಿಸಿಕೊಂಡು ಚರ್ಚಿಸಲಾಗಿದೆ.

೧) **ದಾಂಪತ್ಯ :-** ಜೀವನದ ಬಹುಮುಖ್ಯ ಹಾಗೂ ಅತೀ ದೀರ್ಘವಾದ ಘಟ್ಟ ದಾಂಪತ್ಯ. ಇಲ್ಲಿ ಪರಸ್ಪರ ಗಂಡು-ಹೆಣ್ಣು ತ್ಯಾಗ, ನಿಸ್ವಾರ್ಥತೆ, ಒಲವು ಅತೀ ಅವಶ್ಯಕ. ಪ್ರೀತಿ, ವಿಶ್ವಾಸ, ನಂಬಿಕೆಯೇ ಇದರ ತಳಪಾಯ. ಇದರಲ್ಲಿ ಸ್ವಲ್ಪ ಏರು ಪೇರಾದರೂ ದಾಂಪತ್ಯ ಹಾಳಾಗುತ್ತದೆ. ಮಹಿಳೆಯರು ದಾಂಪತ್ಯದ ಬಗೆಗೆ ಹಲವಾರು ಕವನಗಳನ್ನು ರಚಿಸಿದ್ದಾರೆ. ಈ ಕವನಗಳ ಮೂಲಕ ದಾಂಪತ್ಯದಲ್ಲಿನ ಸ್ತ್ರೀ-ಪುರುಷ ಸಂಬಂಧಗಳನ್ನು, ಅದರ ಸ್ವರೂಪವನ್ನು ಇಲ್ಲಿ ಚರ್ಚಿಸಲಾಗಿದೆ. ದಾಂಪತ್ಯದಲ್ಲಿ ಪರಸ್ಪರ ಗಂಡು-ಹೆಣ್ಣಿನ ನಡುವೆ ಪ್ರೀತಿ, ವಿಶ್ವಾಸ, ನಂಬಿಕೆಗಳಿದ್ದಾಗ ಅಲ್ಲಿ ದಾಂಪತ್ಯವು ಸುಂದರ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಸ್ತ್ರೀ-ಪುರುಷರಿಬ್ಬರೂ ಇಲ್ಲಿ ಅನ್ಯೋನ್ಯವಾಗಿ, ಪರಸ್ಪರ ಸಹಕಾರ ನೀಡುತ್ತಾ ಜೀವನದಲ್ಲಿ ಸಾರ್ಥಕತೆಯನ್ನು ಪಡೆಯಲು ಸಾಧ್ಯ. ಇಂತಹ ದಾಂಪತ್ಯದಲ್ಲಿ ಗಂಡು-ಹೆಣ್ಣು ಅತ್ಯಂತ ನೆಮ್ಮದಿಯಿಂದ ಸಂತೋಷವಾಗಿ ಬಾಳಲು ಸಾಧ್ಯ.

ಪಂಚೇಂದ್ರಿಯಗಳ ಸಮೀಕರಿಸಿ

ರಾಗ ರಂಜಿತ ಬದುಕ

ಮೊಗ ಮೊಗೆದು ಕುಡಿಸಿದ

ಬಡತನದ ಹೊಸತಿಲಲಿ

ಪ್ರೀತಿ ಪಣತೆಯ ಹಚ್ಚಿ

ಸಿಹಿ-ಕಹಿಯ ಕಡಲಾದ

ಹಾಯಿ ದೋಣಿಗೆ ಅಂಬಿಗನಾದೆ

ಹರಿಗೋಲಾದೆ

ಮುಂಜಾವಿನ ತೇಜವಾದೆ. [1] (ನೀ ಕಟ್ಟಿದ ಬುತ್ತಿ)

ಪಂಜರದಂತಿದ್ದ ತವರಿನಿಂದ ಸುಂದರವಾದ ಹೊಸ ಜಗತ್ತಿಗೆ ಕರೆತಂದು ಪ್ರೀತಿಯ ಧಾರೆಯನೆರೆಯುವ ಪತಿ, ಪತ್ನಿಯ ಬಾಳಿಗೆ ಬೆಳಕಾಗಿದ್ದಾನೆ. ಆತ ಹಚ್ಚಿದ ಪ್ರೀತಿಯ ಪ್ರಣತಿ ಅವಳ ಬದುಕಿನುದ್ದಕ್ಕೂ ದಾರಿ ದೀಪವಾಗಿ ಬೆಳಕ ನೀಡುತ್ತದೆ. ಅವನ ನಂತರದಲ್ಲೂ ಆಕೆ ಅವನು ತೋರಿದ ದಾರಿಯಲ್ಲೇ ಸಾಗುವಳು. ಇದು ನಿಜವಾದ ಸಾರ್ಥಕ ದಾಂಪತ್ಯ. ಇಲ್ಲಿ ಒಬ್ಬರಿಗೊಬ್ಬರು ಸಹಕಾರ ಮನೋಭಾವದಿಂದ ಬಾಳುವ ಮೂಲಕ ಇಬ್ಬರ ಬದುಕಿಗೂ ಒಂದು ಅರ್ಥ ಬರಲು ಸಾಧ್ಯ. ಸ್ತ್ರೀ-ಪುರುಷರಿಬ್ಬರೂ ಸಮಾನ ಮನಸ್ಕರಾಗಿ ಬದುಕನ್ನು ಹಂಚಿಕೊಂಡ ದಾಂಪತ್ಯವು ಕೊನೆಯವರೆಗೂ ಉಳಿಯುತ್ತದೆ. ಆದರೆ ಎಲ್ಲ ದಾಂಪತ್ಯಗಳು ಈ ರೀತಿಯಲ್ಲೇ ಇರುತ್ತವೆಂದು ಹೇಳಲಾಗುವುದಿಲ್ಲ. ಅಲ್ಲಿ ಕೇವಲ ಪ್ರೀತಿ, ವಿಶ್ವಾಸ ಮಾತ್ರವಲ್ಲದೆ ಜಗಳ, ಕದನ, ಮುನಿಸುಗಳು ಎಲ್ಲವೂ ಇರುತ್ತವೆ. ಆದರೆ ಹಾಗೆಂದ ಮಾತ್ರಕ್ಕೆ ಇವರಿಬ್ಬರೂ ಸಂಪೂರ್ಣವಾಗಿ ದೂರವಾಗಿ ಬದುಕುವುದಿಲ್ಲ. ಎಷ್ಟೇ ಕದನವಾಡಿದರೂ ಮತ್ತದೇ ಸಂಬಂಧಕ್ಕೆ ಜೋತು ಬೀಳುತ್ತಾರೆ.

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೨೫

ಏಕೆಂದರೆ ಬಚ್ಚಲು ಮನೆಯಲ್ಲಿ

ಇನ್ನೂ ಅವನ ಬೆವರಿನ ವಾಸನೆಯಿದೆ.

ಅಕಸ್ಮಾತ್ ಅವನ ಷರಟಿನ ಜೇಬಿನಲ್ಲಿ

ನನ್ನ ಹೇರ್‌ಪಿನ್ ಸಿಗುತ್ತದೆ

ಅದಕ್ಕೇ.[೧] (ದಾಂಪತ್ಯ-೧)

ಇಲ್ಲಿ ಗಂಡು-ಹೆಣ್ಣಿನ ಸಂಬಂಧಕ್ಕೆ ಅಂತರಾಳದ ಬೆಸುಗೆ ಇದೆ. ಆದ್ದರಿಂದ ಅಷ್ಟು ಸುಲಭವಾಗಿ ಸಣ್ಣ ಸಣ್ಣ ಕಾರಣಗಳಿಗಾಗಿ ದೂರಾಗಲು ಸಾಧ್ಯವಿಲ್ಲ. ಎಷ್ಟೇ ಮನಸ್ತಾಪಗಳಿದ್ದರೂ ಅವರು ದೂರಾಗುವುದಿಲ್ಲ. ಇಲ್ಲಿ ಸ್ತ್ರೀ-ಪುರುಷರ ನಡುವಿನ ಸಂಬಂಧದ ವಿಶಿಷ್ಟತೆ ಅಡಗಿದೆ. ಒಂದಾಗಿ ಬಾಳುವ ಗಂಡು ಹೆಣ್ಣಿನಲ್ಲಿ ಪರಸ್ಪರ ವಸ್ತುಗಳ ವಿನಿಮಯವಿದ್ದಂತೆ ಭಾವಗಳ ವಿನಿಮಯವೂ ಇರುತ್ತದಾದ್ದರಿಂದ ಅದರ ತಳಪಾಯ ಗಟ್ಟಿಯಾಗಿರುತ್ತದೆ. ಆದರೆ ಒಮ್ಮೊಮ್ಮೆ ಈ ತಳಪಾಯವೇ ಅಲುಗಾಡಿದಾಗ ಅಲ್ಲಿ ಸ್ತ್ರೀ-ಪುರುಷ ಸಂಬಂಧ ಹದಗೆಡಲಾರಂಭಿಸುತ್ತದೆ. ಅವರಿಬ್ಬರ ನಡುವೆ ಭಾವನೆಗಳ ವಿನಿಮಯವಾಗದೇ ಹೋದಾಗ ಅವರು ಒಂದಾಗಲು ಸಾಧ್ಯವಾಗುವುದಿಲ್ಲ.

ನಮ್ಮ ಮನೆಯಲ್ಲಿ ಇಬ್ಬರಿದ್ದೆವು

ಎರಡು ಕಾಲಗಳಲ್ಲಿ ಬದುಕುತ್ತಿದ್ದೆವು

ನಮ್ಮ ಕೊರಳುಗಳು ಒಂದು ನೊಗಕ್ಕೆ

ಕೂಡಲೇ ಇಲ್ಲ.[೨] (ಸಂಗಾತ)

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೭೯

೨) ಪೂರ್ವೋಕ್ತ - ೭೯

ಮನೆ ಒಂದಾದರೂ ಮನ ಎರಡಾದಾಗ ಬದುಕು ಸಾಗಬೇಕಾದ ದಾರಿಯೂ ಬೇರಾಗುತ್ತದೆ ಎಂಬುದನ್ನು ಈ ಕವಿತೆ ಕಟ್ಟಿಕೊಡುತ್ತದೆ. ಪತಿ-ಪತ್ನಿಯರ ಆಲೋಚನೆಗಳು, ಅಭಿಪ್ರಾಯಗಳು ತೀರಾ ಭಿನ್ನವಾದಲ್ಲಿ ಅವರ ಮನಸ್ಸುಗಳು ಚಲಿಸುವ ಹಾದಿಯೂ ಭಿನ್ನವಾಗುತ್ತದೆ. ದಾಂಪತ್ಯದಲ್ಲಿ ಅತೀ ಮುಖ್ಯವಾದುದು ಪರಸ್ಪರ ನಂಬಿಕೆ. ಇಲ್ಲಿ ಸ್ತ್ರೀ-ಪುರುಷರ ನಡುವೆ ಅಪನಂಬಿಕೆಯ ಗಾಳಿ ಸುಳಿದಾಡಿದಾಗ, ಅನುಮಾನದ ಭೂತ ತಲೆಯೆತ್ತಿದಾಗ ಆ ಸಂಬಂಧ ತೀರಾ ಅಸಹನೀಯವೆನಿಸುತ್ತದೆ. ಮಹಿಳಾ ಕಾವ್ಯಗಳನ್ನು ನೋಡಿದಾಗ ಈ ಅನುಮಾನದ ಮನೋಭಾವ ಗಂಡಿನಲ್ಲಿ ಹೆಚ್ಚು. ತನ್ನ ಹೆಂಡತಿಯನ್ನೇ ಗಂಡ ಅನುಮಾನಿಸಿದಾಗ ಅವರ ಸಂಬಂಧವು ತನ್ನ ಸೌಂದರ್ಯವನ್ನು, ನೆಮ್ಮದಿಯನ್ನು ಕಳೆದುಕೊಂಡು ಅವರ ಮನಗಳು ಸುಡುವ ಬೆಂಕಿಯಾಗಿ ಬಿಡುತ್ತದೆ.

ಇದ್ದಾನಿವ ನನ್ನ ಕನಸುಗಳ ಸರದಾರ

ಎಂದು ಇದ್ದುಬಿದ್ದುದೆಲ್ಲವ ನೀಡಿ

ಹಿಡಿ ಪ್ರೀತಿಗಾಗಿ ಉರಿವ ಬಯಕೆಯು

ಜ್ವರದೊಳಗೆ ಬೆಂದು ಬೂದಿಯಾದದ್ದೇ ಬಂತು,

ಅವ ಅನುಮಾನದ ಉರಿಯೊಳಗೆ ತನ್ನ ತಾನೇ

ಸುಟ್ಟುಕೊಳುವಲ್ಲಿ ತನ್ಮಯ[೧] (ಈಗೇಕೆ ಹೀಗೆ)

ಅನುಮಾನವು ಸ್ತ್ರೀ-ಪುರುಷರ ನಡುವೆ ಕಾಣಿಸಿಕೊಂಡಾಗ ಅದು ಅವರನ್ನು ಬೆಂಕಿಯಂತೆ ಸುಟ್ಟು ಅವರ ಸಂಬಂಧವನ್ನೇ ನಾಶ ಮಾಡುತ್ತದೆ. ಅನುಮಾನದ ಭೂತ ಹಿಡಿದ ಗಂಡ ಗಂಡನಾಗಿ ಉಳಿಯಲಾರ. ಅವನಲ್ಲಿರುವ ಮನುಷ್ಯತ್ವ ನಾಶವಾಗಿ ಬಿಡುತ್ತದೆ. ಅವನು ತನ್ನ ಹೆಂಡತಿಯಲ್ಲಿ ಹಗೆತನ ಸಾಧಿಸಲಾರಂಭಿಸುತ್ತಾನೆ. ಇದರಿಂದಾಗಿ ಹೆಂಡತಿಯ ಬದುಕು ದುರ್ಭರವೆನಿಸುತ್ತದೆ. ಅವನ ಪ್ರೀತಿಗಾಗಿ ಹಂಬಲಿಸುವ ಅವಳಿಗೆ ಸಿಗುವುದು ಕೇವಲ ನೋವು ಮಾತ್ರ.

---

೧) ಛಾಯಾ ಭಗವತಿ : ಮಟಾಣಿ ಕಂಪು ಪು - ೩೪-೩೫

ನನ್ನನ್ನು

ಮನುಷ್ಯಳಂತೆ

ನೋಡಿದ್ದರೆ ನೀವು

ನಿಮ್ಮ ಆತ್ಮದ ತನುವನ್ನು

ಮುಟ್ಟಲೆಳಸುವ

ನನ್ನ ಕೈ ಕಾಣುತಿತ್ತು

ಆ ಕೈ ಹಿಡಿದು ನೀವು

ನೇವರಿಸಬಹುದಿತ್ತು

ಮನುಷ್ಯರಾಗಿ [೧] (ಸಂಸ್ಕೃತಿ)

ಗಂಡನಾದವನಲ್ಲಿ ತನ್ನ ಹೆಂಡತಿಯ ಬಗೆಗೆ ಪ್ರೀತಿ ಇರಲಿ, ಒಂದು ಸಾಮಾನ್ಯ ಕಳಕಳಿಯೂ ಇಲ್ಲವಾದರೆ ಆ ಸಂಬಂಧಕ್ಕೆ ಅರ್ಥವೇ ಇರುವುದಿಲ್ಲ. ಪ್ರೀತಿಯೇ ಇಲ್ಲದ ದಾಂಪತ್ಯದಲ್ಲಿ ಗಂಡು-ಹೆಣ್ಣಿನ ಚಿಂತನೆಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿರುತ್ತವೆ. ಅವರಲ್ಲಿ ಭಾವನೆಗಳ ಪಿಸುಮಯು ಎಂದೋ ಮುಗಿದ ಅಧ್ಯಾಯವಾಗಿರುತ್ತದೆ.

ಗಂಡ

ಸವೆದ ಕನಸುಗಳನ್ನು ಗುಡ್ಡೆಹಾಕಿ

ಬೆಂಕಿ ಹಚ್ಚುತ್ತಾನೆ.

---

೧) ಜ್ಯೋತಿ ಗುರುಪ್ರಸಾದ್ : ಮಾಯಾಪೆಟ್ಟಿಗೆ - ೬೨

ಹೆಂಡತಿ-

ಮೇಣದ ಬತ್ತಿಗಳಾಗಿ ಉರಿದು ಹೋಗಲಿ

ಎಂದು ತಾರೆಯರನ್ನು ಶಪಿಸುತ್ತಾಳೆ.

ಗೋಡೆಗಳು ಪಿಸುಗುಟ್ಟುತ್ತಿವೆ ಗಂಟಲಲ್ಲಿ

ಪ್ರೀತಿ ಸತ್ತಿದೆ ಮನೆಯಲ್ಲಿ, [1] (ಪ್ರೀತಿ ಸತ್ತ ಮನೆಯಲ್ಲಿ)

ಪ್ರೀತಿ ಇಲ್ಲದ ದಾಂಪತ್ಯದಲ್ಲಿ ಕನಸುಗಳಿಗೆ ಅವಕಾಶವೇ ಇರುವುದಿಲ್ಲ, ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಕನಸೇ ಇಲ್ಲದ ಬದುಕು ಬದುಕಾಗಿರಲು ಸಾಧ್ಯವಿಲ್ಲ. ಹೆಂಡತಿಯನ್ನು ಪ್ರೀತಿಸದ ಗಂಡ ಅವಳನ್ನು ತನ್ನ ಪತ್ನಿಯನ್ನಾಗಿ ನೋಡದೆ ಕೇವಲ ತನ್ನ ಸೇವಕಿಯನ್ನಾಗಿ, ಭೋಗದ ವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ನೋಡಿದಾಗ, ಹೆಣ್ಣಿಗೆ ವ್ಯಕ್ತಿತ್ವವನ್ನೇ ಅಲ್ಲಗಳೆದು ಬಂಧನದಲ್ಲಿರಿಸಿದಾಗ ಅವಳ ಬೆಳವಣಿಗೆಯೇ ಇಲ್ಲದಂತಾಗುತ್ತದೆ. ಅವಳಲ್ಲಿನ ಪ್ರತಿಭೆ, ಕೌಶಲ್ಯಗಳಿಗೆ ಆಸ್ಪದವೇ ದೊರೆಯದೆ ಅವಳು ನಿಧಾನವಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಬಿಡುತ್ತಾಳೆ. ಇದರ ಬಗೆಗೆ ಅವಳ ಮನದಲ್ಲಿ ತೀವ್ರವಾದ ವೇದನೆ, ಸಂಕಟ ಕಂಡು ಬರುತ್ತದೆ.

ಪೈಸೆ ಪೈಸೆಯಾಗಿ ನಾ ವೃದ್ಧಿ ಹೊಂದುತಲಿದ್ದೆ

ಹತ್ತು ನೂರರ ಮೊತ್ತವಾಗದಿದ್ದರೂ ಕೊನೆಗೆ

ರೂಪಾಯಿ ನೋಟಾದರೂ ಆಗುತ್ತಿದ್ದೆ,

ಆದರೇನು ಗೆಳೆಯಾ, ತಾಳಿ ಕಟ್ಟಿದ ಕ್ಷಣದಿಂದಲೇ

ನೀ ನನ್ನ ಚಿಲ್ಲರೆಯಾಗಿಸಿಬಿಟ್ಟೆ, [2] (ಚಿಲ್ಲರೆಯಾಗುತ್ತಿದ್ದೇನೆ)

---

೧) ಸವಿತಾ ನಾಗಭೂಷಣ : [illegible] - [illegible]

೨) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೧೧೪

ಗಂಡನಲ್ಲಿರುವ ಅಧಿಕಾರ, ಅಹಂ, ಸಂಪತ್ತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಹಂಬಲ ಅವಳನ್ನು ಗೃಹ ಬಂಧಿಯಾಗುವಂತೆ ಮಾಡಿ ಅವಳಿಗೆ ಬೆಳವಣಿಗೆಯೇ ಇಲ್ಲದಂತೆ ಮಾಡಿಬಿಡುತ್ತದೆ. ಅಲ್ಲಿ ಅವಳಿಗೆ ಬೆಳವಣಿಗೆಯೇ ಇಲ್ಲದಂತೆ ಮಾಡಿಬಿಡುತ್ತದೆ. ಅಲ್ಲಿ ಅವಳ ವ್ಯಕ್ತಿತ್ವಕ್ಕೆ ಗೌರವವಿರುವುದಿಲ್ಲ. ಗೌರವವಿದ ಬಾಳು, ಗೌರವ ನೀಡದ ವ್ಯಕ್ತಿಗಳೊಂದಿಗೆ ಬದುಕುವುದು ದುಸ್ಸಾಧ್ಯ. ಇಲ್ಲಿ ಗಂಡು-ಹೆಣ್ಣು ಪ್ರೀತಿಯಿಂದ ಬಾಳ್ವೆ ನಡೆಸಲು ಸಾಧ್ಯವಾಗದೆ ಯಾವುದೋ ಅನಿವಾರ್ಯತೆಗೆ ಕಟ್ಟು ಬಿದ್ದು ಬದುಕುತ್ತಿರುತ್ತಾರೆ. ಇಲ್ಲಿ ಅವರ ಸಂಬಂಧದಲ್ಲಿ ಯಾವುದೇ ಆಸಕ್ತಿ, ಕುತೂಹಲ, ಸ್ವಾರಸ್ಯ ಇರುವುದಿಲ್ಲ.

ಒಟ್ಟಾರೆ ಮಹಿಳಾ ಕಾವ್ಯಗಳಲ್ಲಿ ಕಂಡು ಬರುವ ದಾಂಪತ್ಯದಲ್ಲಿ ಸ್ತ್ರೀ-ಪುರುಷ ಸಂಬಂಧಗಳನ್ನು ವಿವೇಚಿಸಿದಾಗ ಅನ್ಯೋನ್ಯ ಸಂಬಂಧಕ್ಕಿಂತ ಅಧಿಕಾರಸ್ಥ ನೆಲೆಯ, ಅಪನಂಬಿಕೆಯ ನೆಲೆಯ, ಯಾಂತ್ರಿಕ ಸಂಬಂಧವೇ ಹೆಚ್ಚಾಗಿರುವುದು ಕಂಡು ಬರುತ್ತದೆ. ಪ್ರೀತಿಯ ಸೊಗಡಿಲ್ಲದ ಅನಿವಾರ್ಯವಾಗಿ ಬದುಕುತ್ತಿರುವ ದಾಂಪತ್ಯದಲ್ಲಿ ಸ್ತ್ರೀ-ಪುರುಷರ ನಡುವೆ ಅನ್ಯೋನ್ಯತೆ ಬಹುದೂರದ ಮಾತು. ಅಲ್ಲಿ ಸದಾ ಅನುಮಾನ, ಮನಸ್ತಾಪ, ಜಗಳ, ನೋವುಗಳೇ ತುಂಬಿರುತ್ತವೆ. ಇಂತಹ ಸ್ಥಿತಿಯಲ್ಲಿ ಗಂಡು-ಹೆಣ್ಣಿನ ಬಾಳು ತೀರಾ ದುಸ್ತರವೆನಿಸುತ್ತದೆ.

**೨) ಪ್ರೇಮ :-** ಗಂಡು-ಹೆಣ್ಣಿನ ನಡುವಿನ ಒಂದು ಅತಿಮಧುರ ಸಂಬಂಧವಿದು. ಪ್ರೇಮಿಗಳಾಗಿ ಸ್ತ್ರೀ-ಪುರುಷರ ನಡುವೆ ಇರುವ ಸಂಬಂಧ ದಾಂಪತ್ಯಕ್ಕಿಂತ ತೀರಾ ಭಿನ್ನವಾದುದು. ಇಲ್ಲಿ ಇಬ್ಬರಲ್ಲೂ ಪರಸ್ಪರ ಅವಲಂಬನೆ ಇರುತ್ತದೆ. ಒಬ್ಬರ ಅಗತ್ಯಗಳು ಇನ್ನೊಬ್ಬರನ್ನು ಅವಲಂಭಿಸಿರುತ್ತದೆ. ಇಲ್ಲಿ ಯಾವ ಅಧಿಕಾರ, ಗರ್ವ, ಅಹಂಗಳೂ ಸ್ತ್ರೀ-ಪುರುಷರ ನಡುವೆ ತಲೆ ಹಾಕುವುದಿಲ್ಲ. ಪರಸ್ಪರ ಪ್ರೀತಿ, ವಿಶ್ವಾಸ, ಸ್ನೇಹ, ನಂಬಿಕೆಗಳೇ ಈ ಸಂಬಂಧದ ಆಧಾರ ಸ್ತಂಭಗಳು. ಮಹಿಳಾ ಕಾವ್ಯಗಳಲ್ಲಿ ಈ ಸಂಬಂಧವನ್ನು ಕುರಿತು ಹಲವು ಕವಿತೆಗಳು ಮೂಡಿಬಂದಿವೆ. ಈ ಕವಿತೆಗಳಲ್ಲಿ ಕಂಡು ಬರುವಂತೆ ಹೆಣ್ಣು-ಗಂಡುಗಳು ಒಬ್ಬರು ಇನ್ನೊಬ್ಬರಲ್ಲಿ ಒಂದಾಗಿ ಹೋಗುವ, ಅಪರೊಳಗೆ ಲೀನವಾಗುವ ಮೂಲಕ ಇಬ್ಬರೂ ಒಬ್ಬರೇ ಆಗಬೇಕೆಂಬ ಹಂಬಲ ಹೆಚ್ಚಾಗಿರುವಂತೆ ತೋರುತ್ತದೆ.

ಪ್ರೀತಿಯ ನನ್ನವನೇ,

ನನ್ನ ಇಡಿಯ ತನವನ್ನು

ದೇಹ, ಪ್ರಾಣವನ್ನು

ನಿನ್ನೊಳಗೆ ಕಳೆದೇ ಕೊಂಡುಬಿಡುವಾಸೆ

ಮತ್ತೆ ನಾನೆಂದರೇನೆಂದು ನನಗೆ ತಿಳಿಯದಂತೆ

ಅಲೆಯದು ಸಾಗರದೊಡನೆ ಒಂದಾಗುವಂತೆ

ನಿನ್ನ ಕೂಡುವಾಸೆ, ಕಾಲ ಸಮ್ಮತಿಸಿದರೆ

ನಿರಾಕಾರದಾಸೆ.[೧] (ನಿರಾಕಾರದಾಸೆ)

ಇಲ್ಲಿ ತನ್ನ ಪ್ರೇಮಿಯ ಸಾಮೀಪ್ಯ ಬಯಸುವ ಹೆಣ್ಣು ಅವನೊಳಗೆ ತನ್ನತನವನ್ನು ಕಳೆದುಕೊಂಡು ನಿರಾಕಾರವಾಗಬಯಸುತ್ತಾಳೆ. ಇಲ್ಲಿ ಅವರ ನಡುವೆ ಯಾವುದೇ ರೀತಿಯ ಅಸ್ತಿತ್ವದ ಪ್ರಶ್ನೆಯಾಗಲಿ, ಸ್ವಾಭಿಮಾನವಾಗಲಿ ಅಡ್ಡ ಬರುವುದಿಲ್ಲ. ಇಲ್ಲಿರುವುದು ಪ್ರೀತಿ ಮಾತ್ರ.

ಭೂಮಿ ಬಾಯಾರಿಕೆಗೆ ಮಳೆ ಸುರಿದು ಬಂತಂತೆ

ನನಗೂ ಬಾಯಾರಿಕೆಯೋ ಗೆಳೆಯ

ಮರುಭೂಮಿಯಂತಿರುವ ನನ್ನ ಮನದಂಗಳಕೆ

ಸ್ನೇಹ ಸಿಂಚನವೆರೆಯೋ ಇನಿಯಾ![೨] (ಭೂಮಿ ಬಾಯಾರಿಕೆಗೆ)

---

೧) ಜ್ಯೋತಿ ಗುರುಪ್ರಸಾದ್ : ಮಾಯಾಪೆಟ್ಟಿಗೆ - ೭೩

೨) ಛಾಯಾ ಭಗವತಿ : ಮಟಾಣೆ ಕೆಂಪು ಹೂ - ೩೧

ಭೂಮಿಯ ಬಾಯಾರಿಕೆಗೆ ಮಳೆ ಹನಿಯು ಅಗತ್ಯವಿರುವಂತೆ, ಪ್ರೇಯಸಿಯ ಮನದ ಬಾಯಾರಿಕೆ ನೀಗಲು ಪ್ರೇಮಿಯ ಸ್ನೇಹ, ಪ್ರೀತಿಯ ಅಗತ್ಯತೆಯನ್ನು ಈ ಕವನ ಸಾರುತ್ತದೆ. ಗೆಳೆಯನ ಸ್ನೇಹ ಇವಳ ಮನದ ಬಾಯಾರಿಕೆ ನೀಗುವ ಜೀವದ್ರವವಾಗಿದೆ. ತನ್ನದೆಲ್ಲವನ್ನೂ ಗಂಡಿಗೆ ಧಾರೆ ಎರೆಯುವ ಮೂಲಕ ಅವನಲ್ಲಿ ಬಂಧಿತಳಾಗುತ್ತಾಳೆ. ಆ ಮೂಲಕ ಅವನ ಪ್ರೀತಿಯನ್ನು ಸಂಪೂರ್ಣವಾಗಿ ಅನುಭವಿಸಲು ಯತ್ನಿಸುತ್ತಾಳೆ.

ಕಾಲಿಗಲ್ಲಿಯ ದಾರಿ

ನೀನೆ ನಾ ನಡೆವ ನೆಲವು

ಹೊರಗೆ ಆಸರ ಬೇಕೆ

ನಾ ನಿನ್ನ ನೆರಳೊಳಗೆ।[1] (ನೆರಳು)

ಗಂಡಿನ ಪ್ರೀತಿಯ ಆಸರೆಯೊಂದಿದ್ದರೆ ಹೆಣ್ಣಿಗೆ ಅದೇ ಸ್ವರ್ಗ. ಇಲ್ಲಿ ಗಂಡಿಗೆ ಹೆಣ್ಣು ಅವನ ನೆರಳಾದರೆ, ಆತ ಆವಳ ಬಾಳಿನ ಹುರುಳು, ಅವಳ ಬಾಳಿಗೆ ಬೆಳಕು. ಅವಳ ಬಾಳಿಗೆ ಎಲ್ಲವೂ ಅವನೇ. ಅವಳ ಬದುಕಿನ ಹೊನ್ನ ಕಳಸ ಆತ.

ನನ್ನಾಣೆ, ನನ್ನೆದೆಗೆ ಕಿವಿಗೊಟ್ಟು ಕೇಳು ಗೆಳೆಯಾ

ದೃಷ್ಟಿ ತಾಕೀತು ಜೋಕೆ

ನನ್ನ, ನಿನ್ನೆದೆಗೆ ಪದಕ ಮಾಡಿಕೋ,

ಕೆಟ್ಟ ಕಣ್ಣಿನ ದೃಷ್ಟಿ ತಾಗದಿರಲೆಂದು

ನನ್ನ ಹೊನ್ನಿನ ಕಳಸ ಜಾರದಿರಲೆಂದು.[2] (ನನ್ನ ಹೊನ್ನ ಕಳಸ)

---

೧) ವೀಣಾ ಬನ್ನಂಜೆ : ಅಕ್ಕನ ಹಾದಿ -೩೬

೨) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೫೮

ಗಂಡು-ಹೆಣ್ಣಿನ ಪ್ರೀತಿಯ ಆಳವನ್ನು ಈ ಕವಿತೆ ತೆರೆದಿಟ್ಟಿದೆ. ಈ ಪ್ರೀತಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ಸಂಬಂಧ ಹದಗೆಡುತ್ತದೆ. ಮನಸ್ಸುಗಳು ಘಾಸಿಗೊಳ್ಳುತ್ತವೆ. ಪ್ರೀತಿಗಿಂತ ಅವರ ನಡುವೆ ವೈಮನಸ್ಸು ಹೆಚ್ಚಾಗುತ್ತದೆ.

ಮಾತು ಮಾತಿಗೂ ಕೋಪ ಸುಡುಸುವೆ

ಏಕೆ ಈ ತರ ಮುನಿಯುವೆ?

ನೋಡಿಕೋ ನಿನ್ನಂತರಂಗವ

ತಪ್ಪನಲ್ಲೇ ಕಾಣುವೆ.[1] (ಜೀವಜಲ)

ಸ್ತ್ರೀ-ಪುರುಷರ ನಡುವೆ ಭಿನ್ನತೆ, ಮನಸ್ತಾಪಗಳು ತಲೆದೋರಿದಾಗ ಸಣ್ಣ ವಿಷಯಗಳಿಗೂ ಕಾದಾಡುವ, ಬೇಸರಿಸುವ ಗುಣ ಬೆಳೆಯುತ್ತಾ ಹೋಗುತ್ತದೆ. ಇದರಿಂದಾಗಿ ಅವರ ಸಂಬಂಧ ಬಣ್ಣ ಕಳೆದುಕೊಂಡ ಚಿತ್ರಪಟದಂತಾಗುತ್ತದೆ. ಆದರೆ ನಿಜವಾದ ಪ್ರೀತಿ ಅವರಿಬ್ಬರಲ್ಲಿದ್ದರೆ ಅವೆಲ್ಲ ಕ್ಷಣಿಕ. ತಮ್ಮ ಪ್ರೀತಿಯನ್ನು ಉಳಿಸಿಕೊಳ್ಳಲು ತಮ್ಮ ಬದುಕನ್ನೇ ತ್ಯಾಗ ಮಾಡಿದವರು ಬಹಳ. ಇದು ಗಂಡು-ಹೆಣ್ಣಿನ ನಡುವೆ ಇರಬೇಕಾದ ನಿಜವಾದ ಪ್ರೀತಿಯಾಗಿದೆ. ಏನೇ ಆದರೂ ಕೊನೆವರೆಗೂ ಜೊತೆಯಾಗಿ ಬಾಳುವುದೇ ಅವರ ಸಂಬಂಧದ ಗಟ್ಟಿತನಕ್ಕೆ ಸಾಕ್ಷಿ.

ವಿಷವಿಳಿದು ನಿನ್ನ ತಿಳಿದೆದ್ದಳು ಪ್ರಮದೆ

ರುರುವಿಗಿಲ್ಲ

ಪುಷ್ಪವೃಷ್ಟಿಯ ಪರಿವೆ

ಮರೆತು ಹೋಗಲಿ ಲೋಕ

ರುರು ಪ್ರಮದೆಯರನು

---

೧) ಡಿ ಬಿ ರಜಿಯಾ : ರಜಿಯಾ ಅವರ ಕವಿತೆಗಳು -೧೨.

ಪ್ರೇಮ ಪ್ರಮತ್ತ

ರುರು ಪ್ರಮದಾ ಪ್ರೀತಿಗೆ

ಲೋಕದ ಸಂಗಿಲ್ಲ.[1] (ರುರು ಪ್ರಮದಾ ಪ್ರೀತಿ)

ಪುರಾಣ ಪಾತ್ರಗಳಾದ ರುರು ಪ್ರಮದಾ ಪ್ರೀತಿ ಆದರ್ಶ ಪ್ರೀತಿಯಾಗಿದೆ. ತನ್ನ ಪ್ರೇಯಸಿ ಸಾವನ್ನಪ್ಪಿದಾಗ ಅವಳಿಗೆ ತನ್ನ ಅರ್ಧ ಆಯಸ್ಸನ್ನು ನೀಡಿ ಬದುಕಿಸಿಕೊಂಡ ಆದರ್ಶ ಪ್ರೇಮಿ ರುರು. ಇದು ನಿಜವಾದ ಪ್ರೀತಿಯ, ಸ್ತ್ರೀ-ಪುರುಷ ಸಂಬಂಧದ ಗಟ್ಟಿತನ. ಈ ಸಂಬಂಧ ಪ್ರೀತಿಯ ತಳಪಾಯದ ಮೇಲೆ ಭದ್ರವಾಗಿ ನಿಂತಿರುವ ಕಾರಣ ಸಾವಿನ ನಂತರವೂ ಬದುಕುವ ಶಕ್ತಿ ಪಡೆದು ಕೊಂಡಿದೆ.

ಹೀಗೆ ಮಹಿಳಾ ಕಾವ್ಯಗಳು ಸ್ತ್ರೀ-ಪುರುಷರ ನಡುವಿನ ಪ್ರೀತಿ, ಪ್ರೇಮದ ಸಂಬಂಧವನ್ನು, ಅದರ ಸ್ವರೂಪವನ್ನು ಕಟ್ಟಿಕೊಡುತ್ತವೆ. ಇಲ್ಲಿ ಗಂಡು-ಹೆಣ್ಣಿನ ನಡುವೆ ಪರಸ್ಪರ ಅವಲಂಬನೆ, ಸ್ಪಂದಿಸುವ ಗುಣ ಹೆಚ್ಚಾಗಿ ಕಂಡುಬರುತ್ತದೆ. ಈ ಸಂಬಂಧ ಗಂಡು-ಹೆಣ್ಣಿನ ಮುಂದಿನ ಜೀವನಕ್ಕೆ ತಳಪಾಯ. ಇಲ್ಲಿ ಅವರು ನಿಜವಾದ ಪ್ರೇಮಿಗಳಾಗಿ ಬದುಕಿದರೆ, ಅವರ ಜೀವನದುದ್ದಕ್ಕೂ ಅದು ಮುಂದುವರಿಯುತ್ತದೆ. ದಾಂಪತ್ಯ ಸಂಬಂಧದ ಮೊದಲ ಹಂತ ಈ ಪ್ರೇಮ ಸಂಬಂಧ. ಇದರ ತಳಪಾಯ ಗಟ್ಟಿ ಇದ್ದಷ್ಟು ದಾಂಪತ್ಯದಲ್ಲಿ ನೆಮ್ಮದಿ ಹೆಚ್ಚಾಗಿರುತ್ತದೆ. ಈ ಸಂಬಂಧ ಸ್ತ್ರೀ-ಪುರುಷರ ನಡುವಿನ ನಿಜವಾದ ಸಂಬಂಧವಾಗಿದೆ.

---

೧) ಸ. ಉಷಾ : ಹವಳ ಹಾರಿದ ಹೊತ್ತು -೨೨

**೩) ಇತರ ಸಂಬಂಧಗಳು :-** ಗಂಡು-ಹೆಣ್ಣಿನ ಸಂಬಂಧಗಳಲ್ಲಿ ಅತ್ಯಂತ ಮಹತ್ವವಾದ ಮಮತೆ, ಕರುಣೆ, ಪ್ರೀತಿ, ವಾತ್ಸಲ್ಯ ಮುಖ್ಯವಾದ ಸಂಬಂಧಗಳೆಂದರೆ ತಂದೆ-ಮಗಳು, ತಾಯಿ-ಮಗ ಹಾಗೂ ಸಹೋದರತ್ವ. ಇಲ್ಲಿ ಒಂದು ರೀತಿಯ ಮುಗ್ಧ ಪ್ರೀತಿ, ವಾತ್ಸಲ್ಯವಿರುತ್ತದೆ. ಜೊತೆಗೆ ಜವಾಬ್ದಾರಿಯೂ ಮುಖ್ಯವಾಗಿರುತ್ತದೆ. ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಸರಿಯಾಗಿ ಬೆಳೆಸಿ, ಅವರ ಜೀವನ ರೂಪಿಸುವುದರಲ್ಲಿ ಅತ್ಯಂತ ಆಪ್ತ ಹಾಗೂ ರಕ್ಷಣಾತ್ಮಕವಾದುದು. ತಮ್ಮ ಮಕ್ಕಳ ಸರ್ವಸ್ವವನ್ನೂ ಕಾಪಾಡುವವರು ಇವರೇ ಆಗಿರುತ್ತಾರೆ. ತಾಯಿ-ಮಕ್ಕಳ ಸಂಬಂಧವು ಅತ್ಯಂತ ವಿಶಿಷ್ಟವಾದುದು. ತನ್ನ ಮಕ್ಕಳಿಗಾಗಿ ತಾಯಿ ತೋರುವ ವಾತ್ಸಲ್ಯ, ಪ್ರೇಮಕ್ಕೆ ಬೆಲೆ ಕಟ್ಟಲಾಗದು. ಅವಳ ಬದುಕನ್ನೇ ಮಕ್ಕಳಿಗಾಗಿ ಧಾರೆಯೆರೆಯುವ ತ್ಯಾಗಮಯಿ ಆಕೆ. ಇಲ್ಲಿ ಮುಖ್ಯವಾಗಿ ತಾಯಿ-ಮಗನ ಸಂಬಂಧದ ಸ್ವರೂಪವನ್ನು ಗಮನಿಸಲಾಗಿದೆ. ತಾಯಿಗೆ ತನ್ನ ಮಗನ ಜನನ ಅವಳ ಬದುಕಿನ ಅತ್ಯಂತ ಆನಂದದ ಕ್ಷಣ. ಅವಳ ಇಡೀ ಬದುಕಿನ ಸಾರ ಆ ಮಗ.

ಮೂಡಿ ಬಂದನಲ್ಲಿಂದ ಸೋಜಿಗದ ಸೂರ್ಯ

ಮನ ಮಂದಿರದ ಹೂವಾಗಿ

ಹೊಳೆವ ದೀಪಿಕೆಯಾಗಿ

ಕಂಗೊಳಿಸುವನು ಈ ಬಾಲಪರ್ವ.[೧] (ಬಾಲಪರ್ವ)

ಮಗನ ಜನನ ಅವಳ ಬಾಳಿಗೆ ಒಂದು ಹೊಸ ತಿರುವು ಸಿಕ್ಕಿದ ಕ್ಷಣ. ಅವನು ತಾಯಿಯ ಬಾಳಿನ ಆಶಾಕಿರಣ. ಅವನ ಬೆಳವಣಿಗೆಯನ್ನು ತಾಯಿ ಆನಂದದಿಂದ ಅನುಭವಿಸುವಳು. ತನ್ನೆಲ್ಲಾ ನೋವು-ನಲಿವುಗಳನ್ನು ಮಗನ ಆಟ-ನೋಟಗಳಲ್ಲಿ ಮರೆವಳು.

---

೧) ಬಿ ಟಿ ಲಲಿತಾ ನಾಯಕ್ : ಬಿದಿರು ಮೆಳೆ ಕಂಟಿಯಲಿ - ೭೫

ನುಣುಪುಗಲ್ಲಕೆ ಗಲ್ಲವಿಟ್ಟರೆ ಮಲೆಪುದೆಲ್ಲಾ ಬೇಸರ

ಎದೆಗೆ ತನುವನು ಅಪ್ಪಿಸಿಡಿದರೆಂಥ ಪ್ರೀತಿಯ ಆಸರ\

ಇಂಥ ಕಂದನ ಇರವೆ ಬದುಕಿಗೆ ಮಧುರ ಜೀವರಸಾಯನ

ಇನ್ನೂ ಇನ್ನೂ ಬಾಳುವಾಸೆ ತುಂಬಿ ತರುವಾ ಚೇತನ [1] (ನನ್ನ ಮಗು)

ತನ್ನ ಪುಟ್ಟ ಕಂದನ ಪುಟ್ಟದಾದ ತನು ತಾಯಿಯ ಬಾಳಿಗೆ ಮತ್ತಷ್ಟು ಬದುಕಬೇಕೆಂಬ ಆಸೆಯನ್ನು ತರಿಸುವ ಚೇತನ. ಅವನ ನೋಟ, ಚಟುವಟಿಕೆಗಳು ಅವಳಿಗೆ ಬಾಲಶಿವನಂತೆ ಗೋಚರಿಸುತ್ತದೆ. ಅವನನ್ನು ಎತ್ತಿ ಮುದ್ದಾಡುವ ತಾಯಿಯ ಬದುಕಿನ ಆನಂದ ವರ್ಣಿಸಲಾಗಂಪದ್ದು. ಈ ಮುಗ್ಧ ಮಗ ದಿನೇ ದಿನೇ ಬೆಳೆಯುತ್ತಾ ಸಮಾಜಕ್ಕೆ ತೆರೆದುಕೊಂಡಂತೆ ಅವನ ವ್ಯಕ್ತಿತ್ವವೂ ಬದಲಾಗುತ್ತಾ ಹೋಗುತ್ತದೆ. ಅವನು ಕೆಲವೊಮ್ಮೆ ವಿಚಿತ್ರ ವರ್ತನೆಗಳಿಂದ ಅವನ ತಾಯಿಯ ಆತಂಕಕ್ಕೂ ಕಾರಣನಾಗುತ್ತಾನೆ.

ಮಗ ದೊಡ್ಡವನಾದನೆಂದು

ತಾಯಿ ಬೀಗಿದಳು

ಮನದೊಳಗೆ ಕಳವಳ

ಹಲ್ಕಟತನ ಬಳುವಳಿ ಪಡೆದವೆ? [2] (ಮಗ ದೊಡ್ಡವನಾದ)

---

೧) ಛಾಯಾ ಭಗವತಿ : ಮಟಾಣಿ ಕೆಂಪು ಶೂ - ೩೭

೨) ದು ಸರಸ್ವತಿ : ಹೆಣದರ ಜೇಡನಂತೆ - ೩೩

ಸೆರಗಲ್ಲಿ ಅವಿತಿಟ್ಟುಕೊಳ್ಳುತ್ತಿದ್ದ ಮಗ ಇಂದು ಬೆಳೆದು ನಿಂತಾಗ ಅವನ ಕಣ್ಣಲ್ಲಿ ಕಾಣುತ್ತಿದ್ದ ಕಳ್ಳನೋಟ ಅವಳಲ್ಲಿ ಮಗನ ಬಗೆಗೆ ಆತಂಕ ಸೃಷ್ಟಿಸುತ್ತದೆ. ಮಗನಲ್ಲಿ ಕಾಣುವ ಈ ವಿಚಿತ್ರ ನಡವಳಿಕೆಗಳಿಂದಾಗಿ ತಾಯಿಯ ಮನ ತಳಮಳಕ್ಕೀಡಾಗುತ್ತದೆ. ಮಗನ ಭವಿಷ್ಯವನ್ನು ಚಿಂತಿಸುವ ತಾಯಿಗೆ ಅವನ ಈ ರೀತಿಯ ನಡವಳಿಕೆಗಳು ಭೀತಿಯನ್ನುಂಟು ಮಾಡುತ್ತದೆ. ಇಲ್ಲಿ ಬೆಳೆಯುವ ಮಗ ಹಾಗೂ ತಾಯಿಯ ನಡುವಿನ ಸಂಬಂಧದ ಸೂಕ್ಷ್ಮ ನೋಟವಿದೆ. ಒಟ್ಟಾರೆ ತಾಯಿ-ಮಗನ ಸಂಬಂಧ ವಿಶಿಷ್ಟವಾಗಿದ್ದು ವಿಭಿನ್ನ ಅನುಭವ ನೀಡುವಂತದ್ದಾಗಿದೆ.

ತಾಯಿ-ಮಗನ ಸಂಬಂಧದಂತೆ ತಂದೆ-ಮಗಳ ಸಂಬಂಧವೂ ಒಂದು ಮಧುರ ಬಾಂಧವ್ಯವಾಗಿದೆ. ತಂದೆಯ ವ್ಯಕ್ತಿತ್ವದ ಪ್ರಭಾವ ಮಗಳಲ್ಲಿ ಹೆಚ್ಚಾಗಿ ಗೋಚರಿಸುತ್ತದೆ. ತಂದೆ ಮಗಳ ಸಂಬಂಧದಲ್ಲಿ ತಂದೆ, ತಾಯಿಗಿಂತ ಭಿನ್ನ. ಅವನ ಬಗೆಗೆ ಮಗಳಲ್ಲಿ ಭಯ ಮಿಶ್ರಿತ ಪ್ರೀತಿ ಇರುತ್ತದೆ. ತಂದೆಯು ಯಾರ ಮಾತನ್ನೂ ಕೇಳದ ವ್ಯಕ್ತಿಯಾಗಿ ಅವನು ಬಯಸಿದಂತೆ ನಡೆದುಕೊಳ್ಳುವವನಾಗಿದ್ದಾನೆ. ತಾಯಿಯಲ್ಲಿ ಮಕ್ಕಳಿಗಿರುವ ಸಲುಗೆ ತಂದೆಯಲ್ಲಿ ಕಡಿಮೆ.

> ಅರವತ್ತರ ಶಾಂತಿ ಕಳೆದು
>
> ಇನ್ನೈದು ವರ್ಷಗಳು ತುಂಬಿತ್ತಪ್ಪ
>
> ಹಗ್ಗ ಬದಲಾಯಿಸುವ ಒಂದೇ ಒಂದು ಅವಕಾಶ
>
> ತೆಗೆದುಕೊಳ್ಳಲೇ ಇಲ್ಲ ಅಪ್ಪ [೧] (ನನ್ನ ಅಪ್ಪ -೩)

ಅಪ್ಪ ತನ್ನ ನಂಬಿಕೆಗಳಿಗೆ ಯಾವತ್ತೂ ಬದ್ಧ, ಅದನ್ನೆಂದೂ ಆತ ಬದಲಾಯಿಸಲಾರ. ತಾನಂದುಕೊಂಡದ್ದೇ ಸರಿ ಎಂಬ, ತನ್ನ ತೀರ್ಮಾನಗಳೇ ಅಂತಿಮ ಎಂದುಕೊಂಡು ಬದುಕಿನಲ್ಲಿ ಬದಲಾವಣೆಯನ್ನೇ ನಿರಾಕರಿಸಿದವ. ಇಲ್ಲಿ ಮಗಳು-ಅಪ್ಪನ ಸಂಬಂಧ ಪೂರ್ಣ ಅಪ್ಪನ ಹಿಡಿತದಲ್ಲಿ ರೂಪಿತಗೊಂಡಂತೆ ಕಂಡು ಬರುತ್ತದೆ. ಅವನು ಎಷ್ಟೇ ಕೋಪಿಷ್ಟನಂತೆ ಕಂಡು ಬಂದರೂ ಅವನ ಮನದಾಳದ ಒಲವು ಅಪಾರ. ತನ್ನ ಮಗಳು ಎಷ್ಟೇ ದೊಡ್ಡವಳಾದರೂ ಅವನಿಗೆ ಮಾತ್ರ ಅವಳಿನ್ನೂ ಪುಟ್ಟ ಕೂಸು.

---

೧) ಜ್ಯೋತಿ ಗುರುಪ್ರಸಾದ್ : ಮಾಯಾಪೆಟ್ಟಿಗೆ - ೧೧

ಲಂಗ ತೊಡುತ್ತಿದ್ದ ಬಾಲೆ

ಏಕಾಏಕಿ ಸೀರೆಯುಟ್ಟು ನೀರೆಯಾದಾಗ

ತಂದೆಯ ಮನದಲ್ಲಿ ಏಳುವ

ಸುಖ ದುಃಖಗಳ ಭಾವನಾ ತೆರೆಗಳ

ಬಾಗು ಬಳುಕುಗಳನ್ನು ತಂದೆಯ

ಹೃದಯ ಸಾಗರವೇ ಬಲ್ಲುದಂತೆ।[1] (ಸೀರೆ ಉಡುವುದು)

ಪುಟ್ಟ ಹುಡುಗಿಯಾಗಿದ್ದವಳು ಸೀರೆಯುಟ್ಟು ಇದ್ದಕ್ಕಿದ್ದಂತೆ ದೊಡ್ಡವಳಂತೆ ಕಂಡಾಗ ತಂದೆಯ ಮನಸ್ಸು ಭಾವನೆಗಳ ತೊಳಲಾಟಕ್ಕೀಡಾಗುತ್ತದೆ. ಏನೋ ಒಂದು ಬಗೆಯ ವಿಚಿತ್ರ ಅನುಭವವಾಗುತ್ತದೆ. ತಂದೆಯ ಈ ಭಾವನೆಗಳ ತೊಯ್ಯಾಟ ಕಂಡ ಮಗಳು ತನ್ನ ಚೂಟಿ, ಮಿಟಿಗಳಲ್ಲೇ ತನ್ನ ಬೆಳವಣಿಗೆಯನ್ನು ಭ್ರಮೆಯಾದರೂ ಮರೆಮಾಚುವ, ಮುಗ್ಧವಾಗಿಡುವ ಯತ್ನ ಮಾಡುತ್ತಾಳೆ. ತಂದೆ-ಮಗಳ ಸಂಬಂಧ ಸೂಕ್ಷ್ಮತೆಯನ್ನಿಲ್ಲಿ ಕಾಣಬಹುದು. ಅವರ ಬಾಂಧವ್ಯದ ಸೂಕ್ಷ್ಮ ನೆಲೆಯನ್ನು ಈ ಕವಿತೆ ಕಟ್ಟಿಕೊಡುತ್ತದೆ.

ತಂದೆ-ಮಗಳ ಸಂಬಂಧದಂತೆ ಸೂಕ್ಷ್ಮವಾದ ಮತ್ತೊಂದು ಸಂಬಂಧ ಎಂದರೆ ಅಣ್ಣ-ತಂಗಿಯದು. ಅಣ್ಣನೆಂದರೆ ಎರಡನೇ ತಂದೆ ಇದ್ದಂತೆ. ತಂದೆಯ ಅಧಿಕಾರ, ವಾತ್ಸಲ್ಯ, ಪ್ರೀತಿ, ಜವಾಬ್ದಾರಿ ಎಲ್ಲವೂ ಇವನಲ್ಲಿರುತ್ತದೆ. ತಂಗಿಯ ಭವಿಷ್ಯಕ್ಕಾಗಿ ಏನೆಲ್ಲಾ ಮಾಡುವವ ಈತ. ತಂಗಿ ಎಂದರೆ ಇವನಿಗೆ ಪ್ರಾಣ. ಅವಳ ಸಂಪೂರ್ಣ ಜವಾಬ್ದಾರಿ ಈತನದೇ. ಅವಳನ್ನು ಮದುವೆ ಮಾಡಿಕೊಡುವವರೆಗೂ ಹಾಗೂ ಆ ನಂತರದಲ್ಲೂ ಇವನು ಅವಳನ್ನು ಕಾಪಾಡುವವ.

---

೧) ಎಂ ಎಸ್ ವೇದಾ : ಬೆಳಲುಗಳು - ೧೮

ಕಿವಿಗೆ ಓಲೆಯನು ತಾನೇ ಸ್ವತಃ ತೊಡಿಸಿ

ಪೆಟ್ಟಿಗೆಗೂ ಸ್ವತಃ ಬಟ್ಟೆ ಜೋಡಿಸಿ ಕೊಟ್ಟು

ಪತಿ ಗೃಹಕ್ಕೆ ಕಳಿಸುತ್ತ ಕಣ್ಣನಸಿ ಮರೆಸಿ

ಮುಗುಳು ನಕ್ಕ ಕ್ಷಣವ ಮರೆವರೇ ತಂಗಿಯರು

ತಮ್ಮ ಕೊನೆ ತನಕ?[೧] (ನಮ್ಮಣ್ಣನೆಂಬಾತ)

ಇಷ್ಟೆಲ್ಲಾ ಮಾಡುವ ಅಣ್ಣನ ಮೇಲಿನ ತಂಗಿಯ ಪ್ರೀತಿಯೂ ಅಂತದ್ದೇ. ತಂಗಿಯ ಪ್ರೀತಿಯ ಕಣ್ಣ ಬಿಂಬ ಅವಳ ಅಣ್ಣ, ಅವನ ಬಗೆಗೆ ಅಪಾರ ಅಭಿಮಾನ ಅವಳಿಗೆ. ಇದು ಅಣ್ಣ-ತಂಗಿ ಬಾಂಧವ್ಯದ ಗಟ್ಟಿತನ. ಅಣ್ಣನಿಗಾಗಿ ತಂಗಿ, ತಂಗಿಗಾಗಿ ಅಣ್ಣ ಮಿಡಿಯುವ ರೀತಿ ಅವರ ಸಂಬಂಧದ ಗಾಢತೆಯನ್ನು ಸೂಚಿಸುತ್ತದೆ. ಒಟ್ಟಾರೆ ಅಣ್ಣ ತಂಗಿಯ ಸಂಬಂಧ ವಿಶಿಷ್ಟವಾಗಿದ್ದು, ಅಲ್ಲಿ ಪ್ರೀತಿಯೇ ಬಹುದೊಡ್ಡ ಆಸ್ತಿ.

ಒಟ್ಟಾರೆಯಾಗಿ ಸ್ತ್ರೀ-ಪುರುಷ ಸಂಬಂಧಗಳನ್ನು ನೋಡಿದಾಗ ಪ್ರತಿಯೊಂದು ರೀತಿಯ ಸಂಬಂಧಗಳು ಸ್ತ್ರೀ-ಪುರುಷನ ನಡುವಿನ ಪ್ರೀತಿ, ವಿಶ್ವಾಸವನ್ನು ಎತ್ತಿ ಹಿಡಿಯುತ್ತವೆ. ಈ ಸಂಬಂಧಗಳು ಪ್ರತಿಯೊಬ್ಬ ವ್ಯಕ್ತಿಗೂ ಅನಿವಾರ್ಯ. ಯಾವುದೇ ಬಗೆಯ ಸಂಬಂಧಗಳಿಲ್ಲದೆ ವ್ಯಕ್ತಿ ಒಂಟಿಯಾಗಿ ಬದುಕಲಾರ. ಈ ಸಂಬಂಧಗಳ ಮಿಡಿತ ಬೇರೆಯಾಗಿರಬಹುದು. ಆದರೆ ಅಗತ್ಯತೆ ಎಂದಿಗೂ ಶಾಶ್ವತ. ತಮ್ಮ ಜೀವನದಲ್ಲಿ ನಿರ್ವಹಿಸುವ ಹಲವು ಪಾತ್ರಗಳಲ್ಲಿ ಸ್ತ್ರೀ-ಪುರುಷರು ಪರಸ್ಪರ ಸ್ಪಂದಿಸ ಬೇಕಾಗುತ್ತದೆ. ಇದು ಯಾವುದೇ ಬಗೆಯಲ್ಲಾಗಿರಬಹುದು. ಆದರೆ ಸ್ಪಂದನ ಅವಶ್ಯಕ. ಸ್ಪಂದನೆಯೇ ಇಲ್ಲದ ಸಂಬಂಧ ಸಂಬಂಧವಾಗಿ ಉಳಿಯಲಾರದು.

---

೧) ವೈದೇಹಿ ಅವರ ಆಯ್ದ ಕವಿತೆಗಳು -೭೭

ಪ್ರತಿಯೊಂದು ವ್ಯಕ್ತಿಯ ಬದುಕಿನಲ್ಲೂ ಒಂದೊಂದು ಹಂತದಲ್ಲೂ ಒಂದೊಂದು ಬಗೆಯ ಪಾತ್ರ ನಿರ್ವಹಣೆ, ಸಂಬಂಧಗಳ ಸ್ಥಾಪನೆ ಅಗತ್ಯವಾಗಿ ಬರುತ್ತದೆ. ಗಂಡು-ಹೆಣ್ಣಿನ ನಡುವೆ ಕಂಡು ಬರುವ ಪ್ರೇಮ ಸಂಬಂಧವು ಅತ್ಯಂತ ಪವಿತ್ರವಾದುದು. ಇಲ್ಲಿ ಇಬ್ಬರ ಭಾವನೆಗಳ ಮಿಳಿತವಾಗುತ್ತದೆ. ಒಬ್ಬರಲ್ಲಿ ಇನ್ನೊಬ್ಬರು ಲೀನವಾಗಿ, ಎರಡು ದೇಹ ಒಂದೇ ಪ್ರಾಣ ಎಂಬಂತೆ ಬದುಕುತ್ತಾರೆ. ಇದು ಅತ್ಯಂತ ಭಾವುಕವಾದ ಸಂಬಂಧವಾಗಿದೆ. ದಾಂಪತ್ಯ ಸಂಬಂಧವು ಭಾವುಕವಾದರೂ ಇಲ್ಲಿ ತಮ್ಮ ವ್ಯಕ್ತಿತ್ವದ ಸ್ಥಾಪನೆ, ಗಂಡನಲ್ಲಿ ಅಧಿಕಾರ, ಅಹಂ ಕೆಲವೊಮ್ಮೆ ಅವರ ಸಂಬಂಧದಲ್ಲಿ ಬಿರುಕು ಮೂಡಲು ಸಾಧ್ಯವಿದೆ. ಇದನ್ನು ಸೂಕ್ಷ್ಮವಾಗಿ ನಿಭಾಯಿಸುವ ಜವಾಬ್ದಾರಿ ಇಬ್ಬರದೂ ಆಗಿರುತ್ತದೆ.

ಮಹಿಳಾ ಕಾವ್ಯಗಳಲ್ಲಿ ದಾಂಪತ್ಯದಲ್ಲಿ ಸ್ತ್ರೀ-ಪುರುಷರ ನಡುವೆ ಹೊಂದಾಣಿಕೆಗಿಂತ ಭಿನ್ನತೆಯೇ ಅತಿಯಾಗಿ ತಲೆದೋರಿದಂತೆ ಕಾಣುತ್ತದೆ. ಪುರುಷರ ಕೆಲವು ಭಿನ್ನ ಮನೋಧೋರಣೆಗಳು ದಾಂಪತ್ಯದಲ್ಲಿ ಬಿರುಕು ಮೂಡಲು ಮುಖ್ಯ ಕಾರಣವಾಗಿ ಕಂಡು ಬರುತ್ತದೆ. ತಂದೆ-ಮಗಳ ಸಂಬಂಧ ಭಯ ಮಿಶ್ರಿತ ಒಲವಿನದ್ದು, ತಂದೆಯು ಮಗಳ ಮೇಲೆ ಅಪಾರ ಒಲವು ಹೊಂದಿದ್ದರೂ ಅದನ್ನು ಪ್ರದರ್ಶಿಸುವುದಿಲ್ಲ. ತಾಯಿ-ಮಗನ ಸಂಬಂಧವೂ ಅತ್ಯಂತ ವಾತ್ಸಲ್ಯಮಯವಾಗಿ ಕಂಡರೂ ಮಗನ ಬೆಳವಣಿಗೆಯನ್ನು ಕುರಿತು ಆತಂಕ ತಾಯಿಯಲ್ಲಿ ಕಂಡು ಬರುತ್ತದೆ. ತಂದೆ-ತಾಯಿಯರ ಪ್ರೀತಿ ನಿಸ್ವಾರ್ಥವಾದದ್ದು. ಅಣ್ಣ-ತಂಗಿಯ ಸಂಬಂಧವೂ ಅತ್ಯಂತ ಆಪ್ತವಾಗಿದ್ದು, ಅಣ್ಣ, ತಂದೆಯ ಜವಾಬ್ದಾರಿಯನ್ನು ಎರಡನೇ ತಂದೆಯಾಗಿ ನಿರ್ವಹಿಸುವವನಾಗಿ ಕಂಡು ಬರುತ್ತಾನೆ. ಅವಳ ಅಂತಃಕರಣಕ್ಕೆ ಮಿಡಿಯುವವನಾಗಿದ್ದಾನೆ. ಒಟ್ಟಾರೆ ಸ್ತ್ರೀ-ಪುರುಷ ಸಂಬಂಧಗಳು ಅವರು ನಿರ್ವಹಿಸುವ ಪಾತ್ರಗಳಲ್ಲಿ ಭಿನ್ನತೆಯನ್ನು ಹೊಂದಿದ್ದರೂ ಅದರ ಅಗತ್ಯತೆಗಳು ಬದಲಾಗುವುದಿಲ್ಲ.

# ಅಧ್ಯಾಯ – ೫

# ಮಹಿಳಾ ಕಾವ್ಯಗಳ ಭಾಷೆ

ಮಹಿಳಾ ಕಾವ್ಯಗಳಲ್ಲಿ ಭಾಷಾ ಬಳಕೆಯನ್ನು ಕುರಿತು ಚಿಂತಿಸುವಾಗ ಮಹಿಳೆಯರು ಸ್ವತಂತ್ರವಾಗಿ ತಮ್ಮ ಅನುಭವ, ಆಲೋಚನೆಗಳನ್ನು ಅಭಿವ್ಯಕ್ತಿಸಲು ಬರವಣಿಗೆಯನ್ನು ಮಾಧ್ಯಮವನ್ನಾಗಿ ಆಯ್ದುಕೊಂಡಂದಿನಿಂದ ಪಟ್ಟ ಬವಣೆಗಳು ಕಣ್ಣೆದುರಿಗೆ ಸುಳಿಯದಿರಲಾರದು. ಕೇವಲ ನಾಲ್ಕು ಗೋಡೆಗಳ ಮಧ್ಯೆಯೇ ತನ್ನಿಡೀ ಜೀವನವನ್ನು ಸವೆಸುತ್ತಿದ್ದ ಹೆಣ್ಣು ತನ್ನೊಳಗಿನ ನೋವು, ಆತಂಕ, ತನಗಾಗುತ್ತಿದ್ದ ಶೋಷಣೆ ಎಲ್ಲವನ್ನೂ ಬರಹದ ಮೂಲಕ ವ್ಯಕ್ತಪಡಿಸಲು ಹೊರಟಾಗ ಅದಕ್ಕೆ ಈ ಸಮಾಜ ಒಡ್ಡಿದ ಅಡ್ಡಿ ಆತಂಕಗಳು ಅದೆಷ್ಟೋ. ಅದೆಲ್ಲವನ್ನೂ ಸಹಿಸಿ, ಮೀರಿ ಇಂದು ಮಹಿಳಾ ಸಾಹಿತ್ಯ ಬೆಳೆದು ನಿಂತಿರುವುದು ಪ್ರಶಂಸನಾರ್ಹ. ಮಹಿಳೆಯರ ಬರವಣಿಗೆ ಒಂದು ನಿರ್ದಿಷ್ಟ ಚೌಕಟ್ಟಿನೊಳಗೆ ಇರಬೇಕೆಂದು ಈ ಸಮಾಜ ಅಪೇಕ್ಷಿಸುತ್ತದೆ. ತನ್ನ ವೈಯಕ್ತಿಕ ಅನುಭವಗಳ, ಶೋಷಣೆ, ಹಿಂಸೆಗಳ ಕುರಿತು ಹೆಣ್ಣು ಬರೆದರೆ ಅದನ್ನು ಸಹಿಸಿಕೊಳ್ಳಲು ಈ ಸಮಾಜ ಸಿದ್ಧವಿಲ್ಲ.

ಮಹಿಳೆಯರಿಗೆ ಈ ನಿಟ್ಟಿನಲ್ಲಿ ಎದುರಾಗುವ ಬಹುದೊಡ್ಡ ಸಮಸ್ಯೆ ಎಂದರೆ ಭಾಷೆಯದ್ದು. ಕಾರಣ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಭಾಷೆಯೂ ಪುರುಷ ನಿರ್ಮಿತವೇ ಆದ ಕಾರಣ ಅದು ಪುರುಷರ ಹಿತಾಸಕ್ತಿಗೆ ತಕ್ಕಂತೆ ನಿರ್ಮಾಣವಾಗಿದೆ. ಸ್ತ್ರೀಯರು ತಮ್ಮ ಸ್ವಾನುಭವಗಳನ್ನು ದಾಖಲಿಸಲು ಹೊರಡುವ ಸಂದರ್ಭದಲ್ಲಿ ಅವರಿಗೆ ಪುರುಷ ನಿರ್ಮಿತ ಭಾಷೆಯಲ್ಲೇ ಅಭಿವ್ಯಕ್ತಿಸಬೇಕಾದ ತೊಡಕುಂಟಾಗುತ್ತದೆ. ತನ್ನ ಜೈವಿಕ ನೈಸರ್ಗಿಕ ಭಿನ್ನತೆಯ ಕಾರಣದಿಂದಾಗಿ ಮಹಿಳೆಯು ಪಡೆಯುವ ಅನುಭವ ಪುರುಷನದಕ್ಕಿಂತ ಭಿನ್ನವಾಗಿರುತ್ತದೆ. ಆದ ಕಾರಣ ಪುರುಷ ನಿರ್ಮಿತವಾದ ಭಾಷೆ ಮಹಿಳೆಗೆ ಸೂಕ್ತವಾದುದಲ್ಲ. ಹೀಗಾಗಿ ಮಹಿಳೆಯರಿಗೆ ತಮ್ಮದೇ ಆದ ವಿಶಿಷ್ಟ ಭಾಷೆಯನ್ನು ರೂಪಿಸಿಕೊಳ್ಳುವ ಅಗತ್ಯವಿದೆ. ಭಾಷೆ ಎಂದರೆ ಅದು ಕೇವಲ ಭಾಷೆಯಲ್ಲ. ಅದು ಒಂದು ಸಂಸ್ಕೃತಿಯ ಪ್ರತಿಬಿಂಬ. ಈ ಭಾಷೆಯು ಪುರುಷ ರೂಪಿತವಾದ್ದರಿಂದ ಹೆಣ್ಣಿನ ಅನುಭವ, ಅಭಿವ್ಯಕ್ತಿಗೆ ಇದು ಸೂಕ್ತವಲ್ಲ.

"ಪುರುಷರೂಪಿ ಸಂಸ್ಕೃತಿಯೊಂದರಲ್ಲಿ ಭಾಷಾ ನೀತಿ ಎನ್ನುವುದು ಲಿಂಗನೀತಿಯನ್ನು ಅನುಸರಿಸಿಯೇ ಇರುತ್ತದೆ. ಅದು ಗಂಡಿನ ಅಸ್ತಿತ್ವ ಮತ್ತು ಹೆಣ್ಣಿನ ಅದೃಶ್ಯತೆಯ ತಾತ್ವಿಕತೆಯನ್ನು ಒಪ್ಪಿಕೊಳ್ಳುವುದಾಗಿರುತ್ತದೆ. ಪುರುಷನಿಗೆ ಸಂಬಂಧಿಸಿದ ಪದಗಳು ಅಧಿಕಾರದೊಂದಿಗೆ ಸಂಬಂಧಿಸಿದ್ದು, ಸ್ತ್ರೀಗೆ ಸಂಬಂಧಿಸಿದ ಪದಗಳು ಅಧೀನತೆಗೆ ಸಂಬಂಧಿಸಿದವುಗಳಾಗಿವೆ. ಈ ದ್ವಂದ್ವ ವೈರುಧ್ಯ ಸಮಾಜದ ಘಟಕವನ್ನು ಇನ್ನೊಂದಕ್ಕಿಂತ ಶ್ರೇಷ್ಠವೆಂದು ಪರಿಗಣಿಸುವ ಪ್ರವೃತ್ತಿಯನ್ನು ತೋರಿಸುತ್ತದೆ. ಭಾಷೆ

ಪುರುಷನ ಶ್ರೇಷ್ಠತೆಯನ್ನು ನಿರ್ದೇಶಿಸುವುದರ ಜೊತೆಗೆ ಅದನ್ನು ಉಂಟುಮಾಡುತ್ತದೆ ಕೂಡಾ. ಈ ಕಾರಣಕ್ಕಾಗಿಯೇ ಸ್ತ್ರೀವಾದಿಗಳು ಭಾಷಿಕ ಸಂಕಥನವನ್ನು ಆರಂಭಿಸಲು ಆಸಕ್ತರಾಗಿದ್ದಾರೆ''[1]

ಸ್ತ್ರೀ ವಿಶಿಷ್ಟ ಅನುಭವಗಳನ್ನು ವ್ಯಕ್ತಪಡಿಸಲು ಮಹಿಳೆಯರಿಗೆ ಒಂದು ಪ್ರತ್ಯೇಕ ಭಾಷೆಯ ಅಗತ್ಯವಿರುವುದರಿಂದ ಅದರ ರಚನೆಯತ್ತ ಆಲೋಚಿಸ ತೊಡಗಿ, ಅದರ ಬಳಕೆಗೆ ಮುಂದಾದರು. ಈ ವಿಶಿಷ್ಟತೆಯಿಂದಾಗಿ ಮಹಿಳಾ ಕಾವ್ಯವು ತನ್ನ ಅಭಿವ್ಯಕ್ತಿ ವಿಧಾನದಲ್ಲಿ ಪುರುಷರ ಸಾಹಿತ್ಯಕ್ಕಿಂತಲೂ ಭಿನ್ನವಾಯಿತು. ಮಹಿಳೆಯರಿಗೆ ಬಳಸಲು ನಿಷೇಧವಿದ್ದ ಕೆಲವು ದೇಹ, ಕಾಮ ಸಂಬಂಧಿ ಪದಗಳನ್ನು ಕವಯಿತ್ರಿಯರು ತಮ್ಮ ಕಾವ್ಯಗಳಲ್ಲಿ ಬಳಸಿಕೊಳ್ಳಲಾರಂಭಿಸಿದರು. ಮೈಥುನ, ಮೊಲೆ, ಸಂಭೋಗ ಇತ್ಯಾದಿ ಪದಗಳ ಬಳಕೆಯಿಂದ ಇದುವರೆಗೂ ಕೇವಲ ಮಹಿಳೆಯರಿಗೆ ಮಾತ್ರ ನಿಷೇಧವಿದ್ದ ಪದಗಳನ್ನು ಬಳಸುವ ಮೂಲಕ ಭಾಷೆಯ ಮೇಲೆ ಸ್ತ್ರೀಯರಿಗಿದ್ದ ನಿರ್ಬಂಧವನ್ನು ಧಿಕ್ಕರಿಸಲಾಯಿತು. ಪ್ರತಿಭಾ ನಂದಕುಮಾರ್ ತಮ್ಮ ಕವನ ಸಂಕಲನ 'ಆಹಾ, ಪುರುಷಾಕಾರಂ!'ನ 'ಕವಿತೆಗೆ ಕಾರಣ'ದಲ್ಲಿ ಹೀಗೆ ಹೇಳಿದ್ದಾರೆ.

"ಹೆಂಗಸರು ಮೊಲೆ, ಸಂಭೋಗ ಇಂತಹ ಪದಗಳನ್ನು 'ಲೀಲಾಜಾಲ'ವಾಗಿ ಬಳಸಬಾರದಂತೆ. ಇದರಿಂದ ಆ ಪದಗಳ ರೋಚಕತೆ ಕಳೆದು ಹೋಗುವುದಂತೆ. ನನ್ನ ಉದ್ದೇಶ ಅದೇ ಅಂದ; ಅಂದರೆ ಹಳೆಯ, ಪುರಾತನ role model ನಿಂದ ಹೊರ ಬಂದು ಅಭಿವ್ಯಕ್ತಿಗೆ ಹೊಸ ಆಯಾಮ ನೀಡುವುದು''.[2]

ಇಲ್ಲಿ ಮಹಿಳಾ ಕಾವ್ಯಗಳು ಪುರುಷ ನಿರ್ಮಿತ ಮೌಲ್ಯಗಳಿಗೆ ಭಿನ್ನವಾದ ಸ್ವಂತಿಕೆಯನ್ನು ಕಟ್ಟಿಕೊಳ್ಳುವ, ಸಾಂಪ್ರದಾಯಿಕ ನೀತಿಯ ಬದಲಾಗಿ ಹೊಸತನ್ನು ಕಂಡುಕೊಳ್ಳುವ ಬಯಕೆ ವ್ಯಕ್ತ ಪಡಿಸಿರುವುದು ಗಮನಾರ್ಹ. ಈ ಎಲ್ಲ ಹಿನ್ನಲೆಯಲ್ಲಿ ಮಹಿಳಾ ಕಾವ್ಯಗಳಲ್ಲಿ ಬಳಕೆಯಾಗಿರುವ ಭಾಷೆಯನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಎರಡು ರೀತಿಯಲ್ಲಿ ಭಾಷಾ ಬಳಕೆಯನ್ನು ಗುರುತಿಸಲಾಗಿದೆ.

---

೧) ಸಂ. ಎಚ್ ದಂಡಪ್ಪ, ಬಿ ಎನ್ ಸುಮಿತ್ರಾ ಬಾಯಿ : ಸುವರ್ಣ ಸಾಹಿತ್ಯ ವಿಮರ್ಶೆ -೪೨೫

೨) ಪ್ರತಿಭಾ ನಂದಕುಮಾರ್ : ಆಹಾ, ಪುರುಷಾಕಾರಂ! - VI

೧) ಮಹಿಳೆಯರು ನೇರವಾಗಿ ಪುರುಷನನ್ನು ಕುರಿತಾಗಿ ಹೇಳುವಾಗ ಬಳಸಿದ ಭಾಷೆ ಹಾಗೂ

೨) ಪ್ರತಿಮೆ, ರೂಪಕ, ಪ್ರತೀಕ, ಸಂಕೇತಗಳ ಮೂಲಕ ಪರೋಕ್ಷವಾಗಿ ತಮ್ಮ ಅನುಭವ, ಭಾವನೆಗಳನ್ನು ವ್ಯಕ್ತಪಡಿಸಿದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

ಮಹಿಳೆಯರಿಗಿದ್ದ ಭಾಷಿಕ ತೊಡಕುಗಳನ್ನು ಮೀರಿ, ಭಾಷೆಯ ಮಡಿವಂತಿಕೆಯನ್ನು ತೊರೆದು ನೇರವಾಗಿ ಪುರುಷರ ಬಗ್ಗೆ, ಈ ಸಮಾಜದ ಬಗ್ಗೆ, ಭಾಷೆಯ ಬಗ್ಗೆ ಮಹಿಳೆಯರು ಚಿಂತಿಸಿದ ಕ್ರಮವನ್ನು ಅರಿಯುವ ಹಾಗೂ ಕೆಲವೊಮ್ಮೆ ನೇರವಾಗಿ ಹೇಳಲು ಸಾಧ್ಯವಾಗದ ಪ್ರತಿಮೆ, ಪ್ರತೀಕ ಇತ್ಯಾದಿಗಳ ಮೂಲಕ ಅಭಿವ್ಯಕ್ತಿಸಿದ ಚಿಂತನೆಗಳು ಪ್ರಮುಖವೆನಿಸಿದ ಕಾರಣ ಇದನ್ನು ಅರಿಯುವ ಸಲುವಾಗಿ ಈ ಅಧ್ಯಾಯದಲ್ಲಿ ಮುಖ್ಯವಾಗಿ ಈ ಎರಡು ರೀತಿಗಳನ್ನು ಮಾತ್ರ ಚರ್ಚೆಗೊಳಪಡಿಸಲಾಗಿದೆ. ಪುರುಷ ಪಾತ್ರಗಳನ್ನು ಕುರಿತು ಮಹಿಳಾ ಕಾವ್ಯಗಳಲ್ಲಿ ಹೇಳುವಾಗ ಬಳಕೆಯಾದ ಭಾಷೆಯ ಮೂಲಕ ಮಹಿಳೆಯರ ಭಾವನೆಗಳನ್ನು, ಆಕ್ರೋಶ, ವ್ಯಂಗ್ಯಗಳನ್ನು ಅರ್ಥೈಸಿಕೊಳ್ಳಬಹುದು.

ಅಯ್ಯಾ, ನನಗನಗನಿಸುತ್ತದೆ

ಹಂಗೊಮ್ಮೆ, ಹಿಂಗೊಮ್ಮೆ

ಹೆಣ್ಣ ಬುಗುರಿಯಾಡ ಬಯಸುವ

ಇವುಗಳ ಕುಂಡಿಗೆ

ಒಮ್ಮೆಯಾದರೂ ಬಾಡಿಸಿ ಒದೀಬೇಕು. [೧] (ಸರ್ವಮಂಗಳ - ಭಂಡರು)

ಶತಶತಮಾನಗಳಿಂದಲೂ ಹೆಣ್ಣನ್ನು ಶೋಷಿಸುತ್ತಾ, ಅವಳನ್ನು ಭೋಗದ ವಸ್ತುವೆಂದು ಮಾತ್ರ ಕಂಡು ಅವಳನ್ನು ಹಿಂಸಿಸಿದ, ಮೇಲೆ ಪ್ರಗತಿಪರನಂತೆ ನಟಿಸಿ ಹಿಂದೆ ಹೆಣ್ಣಿಗೆ ಅನ್ಯಾಯವೆಸಗುವ ಪುರುಷರ ನೀಚ ಬುದ್ಧಿಯ ಕುರಿತು ಇಲ್ಲಿ ವ್ಯಂಗ್ಯ, ಆಕ್ರೋಶದ ದನಿ ಇದೆ. ಇಲ್ಲಿ ಹೆಣ್ಣಿನ ಆಕ್ರೋಶದ ತೀವ್ರತೆ ಎಷ್ಟಿದೆ ಎಂದರೆ ಅವನ ಎಲ್ಲ ಅನ್ಯಾಯಗಳ

---

೧) ಸಂ ಹಂಪ ನಾಗರಾಜಯ್ಯ : ಹೊಸಗನ್ನಡ ಕವಿತೆ -೪೧೨.

ವಿರುದ್ಧ ಒಮ್ಮೆಯಾದರೂ ಅವನಿಗೆ ಜಾಡಿಸಿ ಒದೆಯುವಷ್ಟು, ಇಲ್ಲಿ ಭಾಷೆ ಯಾವ ಶಿಷ್ಟತೆಯ ಮುಲಾಜಿಗೂ ಒಳಪಡದ ಹೊರಬಂದ ನೋವಿನ ನಿಷ್ಠುರ ನುಡಿಗಳಾಗಿವೆ.

ಮಗ ದೊಡ್ಡವನಾದನೆಂದು

ತಾಯಿ ಬೀಗಿದಳು

ಮನದೊಳಗೆ ಕಳವಳ

ಹಲ್ಕಟತನ ಬಳುವಳಿ ಪಡೆದನೆ?[1] (ಮಗ ದೊಡ್ಡವನಾದ)

ಇಲ್ಲಿ ಮಗನ ಬೆಳವಣಿಗೆಯ ಬಗೆಗೆ ತಾಯಿಯಲ್ಲಿ ಉಂಟಾಗುವ ಆತಂಕ, ತಲ್ಲಣ, ಸಂಶಯಗಳನ್ನು ಕಾಣಬಹುದು. ಮಗ ಸಣ್ಣವನಿದ್ದಾಗಿನ ಮುಗ್ಧತೆ ಇಂದು ಅವನು ಬೆಳೆದಂತೆ ಮಾಯವಾಗಿ ಬೆತ್ತಲು ಮೈಯನ್ನು ಕದ್ದು ನೋಡುವಂತಹ 'ಹಲ್ಕಟತನ' ರೂಢಿಸಿಕೊಂಡ ಬಗೆಗೆ ಈ ಕವನ ಹೇಳುತ್ತದೆ. ತೀರಾ ನೇರ ನುಡಿಗಳಿಂದ ಇಲ್ಲಿ ಮಗನ ನಡವಳಿಕೆಯನ್ನು ಚಿತ್ರಿಸುವುದರ ಜೊತೆಗೆ ಪುರುಷ ಸಮಾಜದ ಚಿತ್ರಣವನ್ನಿಲ್ಲಿ ನೀಡಲಾಗಿದೆ. ಬೆಳೆಯುವ ಮಗನ ವ್ಯಕ್ತಿತ್ವದ ಅನಾವರಣ ಈ ಒಂದು ಪದದಿಂದಲೇ ಸಾಧ್ಯವಾಗಿದೆ. ಈ ರೀತಿಯ ಪುರುಷನ ದುರ್ಗುಣಗಳು, ಚಾಂಚಲ್ಯತೆ ಮಾನವರಲ್ಲಿ ಮಾತ್ರವಲ್ಲದೆ ದೇವತೆಗಳಲ್ಲೂ ಕಾಣಿಸಿಕೊಳ್ಳುತ್ತದೆ.

ಬೈರಾಗಿ ಬೂದಿ ತೊಳೆಯುತ್ತ ಹಚ್ಚಗೆ ನೋಡುವಳು

ಮೆತ್ತಗೆ ಮೈ ಒರೆಸಿ ಪುಂಟಾಲು ಉಡಿಸಿ

ತೊಡೆ ಮೆತ್ತೆಯನು ನೀಡಿ ಗೋರುವಳು

ಶಿವ ಶಿವಾ!

ಎಲ್ಲ ನದಿಗಳ ನೆನೆದು ಮಲಗುದೇವ[2] (ಶಿವನ ಮೀಸುವ ಹಾಡು)

---

೧) ದು ಸರಸ್ವತಿ : ಹೆಣದರೆ ಜೇಡನಂತೆ - ೩೩

೨) ವೈದೇಹಿ ಅವರ ಆಯ್ದ ಕವಿತೆಗಳು -೨೪-೨೫

ಈ ಸಾಲುಗಳಲ್ಲಿ ಅಪಾರ ನೋವು, ವ್ಯಂಗ್ಯ ವ್ಯಕ್ತವಾಗಿದೆ. ಶಿವನ ಪರಸ್ತ್ರೀ ಸಂಗ ಗೌರಿಯಲ್ಲಿ ಮೂಡಿಸುವ ನೋವು, ಅದರ ಬಗಗೆ ಅವಳಲ್ಲಿ ಅವನ ಕುರಿತಾಗಿ ಮೂಡುವ ವ್ಯಂಗ್ಯ ಇಲ್ಲಿದೆ. 'ಎಲ್ಲ ನದಿಗಳ ನೆನೆದು ಮಲಗು' ಎನ್ನುವ ಮಾತಿನಲ್ಲಿ ಶಿವನ ಅನ್ಯ ಸ್ತ್ರೀ ಮೋಹದ ಬಗೆಗೆ ಗೌರಿಯಲ್ಲಿ ಮನದ ನೋವಿನ ತೀವ್ರತೆ ಇದೆ.

ಅರ್ಧ ಈಶ್ವರನಾಗಿ

ಎನ್ನುವ ಹುಚ್ಚು ನಂಬಿಕೆಯಲ್ಲೂ ಇಲ್ಲ.

ಗಂಡೆಂದರೆ ಒಂದು ವೀರ್ಯ ತಾನೇ?

ಉಳಿದಂತೆ ಕೈ ಕಾಲು ಎದೆ ಹೊಟ್ಟೆ ಬರಿ

ಬವಣೆ. ಗಂಡೆಂಬ ಗತ್ತು ಗರ್ವ ಗೌಡಿಕೆ

ಗಳು ಮಲಗಿ ಬಿಡುತ್ತವೆ ಕೆಲಸವಾದ ಮೇಲೆ.

ಒಬ್ಬಳೇ ಇರಬಲ್ಲೆನೆಂದು ಸಾಧಿಸಿದ ನಂತರವಂತೂ

ಈಶ್ವರ ಮೂಲೆ ಹಿಡಿದು ಮುಲುಗುತ್ತಾನೆ ಮೂದೇವಿಯಂತೆ.[೧] (ಅರ್ಧನಾರೀಶ್ವರ)

'ಅರ್ಧನಾರೀಶ್ವರ' ಎಂಬ ಪರಿಕಲ್ಪನೆಯನ್ನೇ ಈ ಕವಿತೆ ಒಡೆದು ಹಾಕುತ್ತದೆ. ಸೃಷ್ಟಿ ಕ್ರಿಯೆಯಲ್ಲಿ ಗಂಡು ಒಂದಂಶ ಮಾತ್ರ. ಉಳಿದೆಲ್ಲ ಪರಿಶ್ರಮ ಹೆಣ್ಣಿನದು. ಗಂಡು ಎಂದರೆ ವೀರ್ಯ ಮಾತ್ರ. ಹೆಣ್ಣು ಗಂಡನ್ನು ತಿರಸ್ಕರಿಸಿ ಒಬ್ಬಳೇ ಬದುಕಲು ನಿರ್ಧರಿಸಿದರೆ ಗಂಡಿನ ಬಾಳು ಮೂಲೆಯಲ್ಲಿ ಮುಲುಗುವ 'ಮೂದೇವಿ'ಯಂತೆ. ಈ ಪದದ ಬಳಕೆಯ ಹಿಂದೆ ಹೆಣ್ಣಿಲ್ಲದ ಗಂಡಿನ ಬಾಳಿನ ಸ್ಥಿತಿಯ ಚಿತ್ರಣವಿದೆ. ಹೆಣ್ಣಿಲ್ಲದೆ ಗಂಡಿಗೆ ಜೀವನವೇ ಇಲ್ಲ ಎಂಬುದನ್ನು ಈ ಸಾಲುಗಳು ಚಿತ್ರಿಸುತ್ತವೆ. ಇಲ್ಲಿ ಭಾಷೆಯ ಹರಿತದ ತಿವಿತ ಯಾರನ್ನೂ ಬಿಟ್ಟಿಲ್ಲ.

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೧೦೩

ಸಾಮಾನ್ಯವಾಗಿ ಹೆಣ್ಣನ್ನು ತಾಯಿಯೆಂದು ಗೌರವಿಸುವಂತೆ ಭೂಮಿಯನ್ನೂ ಭೂಮಿತಾಯಿ ಎಂದು ಗೌರವಿಸಲಾಗುತ್ತದೆ. ಆದರೆ ಅದು ಹೇಳಿಕೆಯಲ್ಲಷ್ಟೇ ಉಳಿದಾಗ ಆ ಪದವು ತನ್ನ ಅರ್ಥವನ್ನೇ ಕಳೆದುಕೊಳ್ಳುತ್ತದೆ.

ಭೂಮಿ ತಾಯೆಂದು ಕರೆದು

ನೀಲಗಿರಿ ಸಾಲುಗಳ ನೆಟ್ಟು

ಶೀಲ ಭಂಗ ಮಾಡುತ್ತಾರೆ.

ತಾಯಿ ನದಿಯೆಂದು ಕರೆದು

ಹೊಲಸು ಹರಿಬಿಟ್ಟು ತಾಯಿಗಂಡರಾಗುತ್ತಾರೆ [1] (ಬೆಳಕು)

ಹೆಣ್ಣನ್ನು ತಾಯಿ ಎಂದು ಕರೆದು, ಗೌರವಿಸುವಂತೆ ನಾಟಕವಾಡಿ ಅವಳ ಮಾನಭಂಗ ಮಾಡುವ, ಭೂಮಿಯನ್ನು ತಾಯಿಗೆ ಹೋಲಿಸಿ ಅದನ್ನು ಹಾಳುಮಾಡುವ, ನದಿಯನ್ನು ತಾಯಿಯೆಂದು ಕರೆದು ಅದಕ್ಕೆ ಹೊಲಸು ಸೇರಿಸುವ ಈ ನೀಚ, ದುರ್ನಡತೆಯ ಪುರುಷರನ್ನು 'ತಾಯಿಗಂಡ'ರೆಂದು ಕರೆಯುವ ಮೂಲಕ ಅತ್ಯಂತ ಕಠಿಣ ಭಾಷೆಯನ್ನಿಲ್ಲಿ ಬಳಸಲಾಗಿದೆ. ಈ ಸಾಲುಗಳಲ್ಲಿ ಅಪಾರವಾದ ನೋವು ಮಡುಗಟ್ಟಿದೆ. ಇಲ್ಲಿ ಬಳಕೆಯಾಗಿರುವ ಭಾಷೆಯ ಹಿನ್ನಲೆಯಲ್ಲಿ ಆ ಹೆಣ್ಣಿನ ಅಥವಾ ಒಟ್ಟಾರೆ ಸ್ತ್ರೀ ಸಮಾಜ ಅನುಭವಿಸಿದ ನೋವಿನ ಚಿತ್ರಣ ಹಾಗೂ ಪುರುಷರ ಬಗೆಗಿನ ಆಕ್ರೋಶವಿದೆ.

ರಾತ್ರಿ ಎಂದಿನಂತೆ,

ನೆನಪುಗಳ ನಡುವೆ ಬಿಕ್ಕುತ್ತ

ನೋವುಗಳ ನಡುವೆ ಮಗ್ಗುಲು ಬದಲಿಸುತ್ತ

---

೧) ಸುಕನ್ಯಾ ಮಾರುತಿ : ನಾನೆಂಬ ಮಾಯೆ -೧೬೪

ಅವನ ಬಯಕೆಯ ಮುಳ್ಳುಗಳಿಗೆ

ಸೆರಗ ಹಾಸಿದರೂ, ನೆಮ್ಮದಿ ಕಳೆದುಕೊಳ್ಳುವ

ಅತೃಪ್ತ ಪುರುಷ ಮೃಗ [೧] (ಈಗೇಕೆ ಹೀಗೆ...?)

ಗಂಡು-ಹೆಣ್ಣಿನ ನಡುವಿನ ದಾಂಪತ್ಯದಲ್ಲಿ ಹೆಣ್ಣು ಸ್ಪಂದಿಸುವಷ್ಟೇ ಗಂಡೂ ಸ್ಪಂದಿಸಿ ಬಾಳಬೇಕು. ಇಲ್ಲವಾದಲ್ಲಿ ಅವನು 'ಪುರುಷ ಮೃಗ'ದ ರೀತಿ ಕಾಣುತ್ತಾನೆ. ಆತನಲ್ಲಿ ಮನುಷ್ಯತ್ವಕ್ಕೆ ಬದಲಾಗಿ ಮೃಗೀಯತ ತಲೆದೋರುತ್ತದೆ. ಹೆಂಡತಿಯ ಭಾವನೆಗಳಿಗೆ ಸ್ಪಂದಿಸದ, ಸಹಜವಾಗಿ ವರ್ತಿಸದ ಗಂಡನ್ನಿಲ್ಲಿ ಮೃಗವೆಂದು ಕರೆಯಲಾಗಿದೆ. ಹೀಗೆ ಕರೆಯುವಲ್ಲಿ ಹೆಣ್ಣಿನ ಮನಸ್ಸಿನ ವೇದನೆ ಇಲ್ಲಿ ವ್ಯಕ್ತವಾಗಿದೆ.

ಕಪ್ಪು ಕತ್ತಲಿನ ಚಳಿಯೊಳಗೆ

ನಾನಿದ್ದೆ ಅವನಿರಲಿಲ್ಲ.

'ಅವ'

ಬೆಳಕು ಹೊತ್ತು ಬಂದ ಸಮಯ

ನೀನಿದ್ದೆ, ನಾ ಕವುಚಿ ಮಲಗಿದ್ದೆ,

ಬಿರುಗಾಳಿಗೆ ತರಗೆಲೆಯಾಗಿ

ನೀನಿದ್ದೆ, ನಾನಿರಲಿಲ್ಲ.

ಹೀಗೇಕೆ?

---

೧) ಛಾಯಾ ಭಗವತಿ : ಮಟಾಣಿ ಕೆಂಪು ಶೂ - ೩೫

ನೀ ಕೊಂಚ ಸರಿದು ಬಾ

ಬೆಳಕಿನವ ಬಂದಾಗ

'ನಾ' ಇರಬೇಕು.[1] (ನೀನಿದ್ದ ನಾನಿರಲಿಲ್ಲ)

ಇಲ್ಲಿ ಪದಗಳ ಬಳಕೆ ಅತ್ಯಂತ ವಿಶಿಷ್ಟ ತಂತ್ರದಿಂದ ಆಟವಾಡಿದಂತಿದೆ. ಇಲ್ಲಿ ಕವಯಿತ್ರಿಗಿರುವ ಭಾಷೆಯ ಹಿಡಿತ ಗೋಚರಿಸುತ್ತದೆ. ಈ ಕವನದ ಪದಗಳು ಅದರ ಅರ್ಥಗಳೊಂದಿಗೆ ಜೂಟಾಟವಾಡುತ್ತವೆ. ಇಲ್ಲಿ ಸವಲತ್ತುಗಳೆಲ್ಲ ಗಂಡಿನ ಪಾಲಾಗಿ, ಹೆಣ್ಣು ಅದರಿಂದ ವಂಚಿತಳಾದ ಸ್ಥಾನದಲ್ಲಿದ್ದಾಳೆ. ಆದರೆ ಆ ಸವಲತ್ತನ್ನು ಪಡೆಯುವ ಹಂಬಲ ಮಾತ್ರ ಅವಳಲ್ಲಿ ಗಟ್ಟಿಯಾಗಿದೆ.

ಹೀಗೆ ಮಹಿಳಾ ಕಾವ್ಯಗಳಲ್ಲಿ ಭಾಷಾ ಬಳಕೆಯ ಪರಿಯನ್ನು ಗುರುತಿಸಬಹುದು. ಈ ರೀತಿಯ ಬಳಕೆಯ ಹಿಂದೆ ಮಹಿಳೆಯರ ಮನಸ್ಥಿತಿ, ಆಗಿನ ಅವರ ಸಂದರ್ಭಗಳು ಹೇಗೆ ಕೆಲಸ ಮಾಡಿವೆ ಎಂಬುದು ಗೋಚರಿಸುತ್ತದೆ. ಹೆಣ್ಣಿಗೆ ನಿರ್ಬಂಧವಿದ್ದ ಪದಗಳ ಬಳಕೆಯನ್ನು ಮಹಿಳಾ ಕಾವ್ಯಗಳು ನೇರವಾಗಿ ಕಾವ್ಯಗಳಲ್ಲಿ ಬಳಸಿಕೊಳ್ಳುವುದರ ಮೂಲಕ ತಮ್ಮ ಬಗೆಗಿನ ಸಾಂಪ್ರದಾಯಿಕ ನಿರ್ಬಂಧಗಳನ್ನು ಮಿತಿಗಳನ್ನು ತೊಡೆದು ಹಾಕಲಾಗಿದೆ.ಎಲ್ಲ ರೀತಿಯಲ್ಲೂ ತಮ್ಮ ಅನುಭವಗಳನ್ನು ಪುರುಷರಿಗೆ ಸಮಾನವಾಗಿ, ಸ್ಪಷ್ಟವಾಗಿ ಇಂದು ಮಹಿಳೆಯರು ಹೊರಹಾಕುತ್ತಿದ್ದರೂ ಪೂರ್ಣ ಪ್ರಮಾಣದಲ್ಲಿ ಅದು ಸಾಧ್ಯವಾಗಿಲ್ಲ ಎನ್ನಬಹುದು.

'ಪುರುಷ ಪ್ರಧಾನ ನಿರೀಕ್ಷಿತ ಅಧೀನತೆಯ ಒಳಗಡೆ ಅನುಭವ ಜೀವಕ್ಕೆ ಮೈಕೊಡುವ ಪ್ರಕ್ರಿಯೆ ಹೆಣ್ಣಿಗೆ ಗಂಡಿನಷ್ಟೇ ಸಲೀಸಲ್ಲ. ಇಲ್ಲಿ ಹೆಣ್ಣಿಗೆ ಅನೇಕ ಸಾಂಸ್ಕೃತಿಕ, ಭಾಷಿಕ ಒತ್ತಡಗಳಿವೆ. ತನ್ನ ವೈಯಕ್ತಿಕತೆ, ಗ್ರಹಿಕೆಯನ್ನು ನೇರವಾಗಿ ಅಭಿವ್ಯಕ್ತಿಸಲಾರದಂತಹ ಸಾಂಸ್ಕೃತಿಕ ರಾಜಕಾರಣ ಇಲ್ಲಿ ಕೆಲಸ ಮಾಡುತ್ತದೆ. ಆದರೆ ಅಭಿವ್ಯಕ್ತಿಯನ್ನು ತಡೆಯುವುದು ಅಷ್ಟು ಸುಲಭದ ಕೆಲಸವೇನೂ ಅಲ್ಲ. ಹೀಗೆ ನೇರವಾಗಿ ಹೇಳಲು ಸಾಧ್ಯವಾಗದ ಸಂಗತಿಗಳನ್ನು ಹೆಣ್ಣು ರೂಪಕದ, ಪ್ರತಿಮೆಯ, ಸಂಕೇತದ ರೂಪಗಳಲ್ಲಿ ಹೇಳುತ್ತಾಳೆ.'[2]

---

೧) ದು ಸರಸ್ವತಿ : ಹೆಣೆದರೆ ಜೇಡನಂತೆ -೩೨

೨) ಸಂ. ಎಚ್ ದಂಡಪ್ಪ, ಬಿ ಎನ್ ಸುಮಿತ್ರಾ ಬಾಯಿ : ಸುವರ್ಣ ಸಾಹಿತ್ಯ ವಿಮರ್ಶೆ -೪೨೨

ಮಹಿಳಾ ಕಾವ್ಯಗಳಲ್ಲಿ ಬಳಕೆಯಾಗುವ ಪ್ರತಿಮೆ, ಪ್ರತೀಕ, ರೂಪಕ ಇತ್ಯಾದಿಗಳನ್ನು ಗಮನಿಸುವುದರ ಮೂಲಕ ಅವುಗಳಲ್ಲಿನ ಮಹಿಳೆಯರ ಚಿಂತನೆ, ಆಲೋಚನೆ, ಅನುಭವಗಳ ವೈಶಿಷ್ಟ್ಯತೆಯನ್ನು ಅರಿಯಲು ಸಾಧ್ಯವಿದೆ. ಇವುಗಳು ತಮ್ಮ ವಿಶಿಷ್ಟತೆಯಿಂದಾಗಿ ಹೆಚ್ಚು ಆಪ್ತವೆನಿಸುತ್ತವೆ. ಸ್ತ್ರೀ-ಪುರುಷರನ್ನು ಕುರಿತು, ಅವರ ನಡುವಿನ ಸಂಬಂಧಗಳನ್ನು ಕುರಿತು ಹೇಳುವಾಗ ಹಲವಾರು ಪ್ರತಿಮೆಗಳು ರೂಪಕ, ಸಂಕೇತ, ಪ್ರತೀಕಗಳನ್ನು ಬಳಸಿಕೊಳ್ಳಲಾಗಿದೆ. ಈ ಕುರಿತು ಇಲ್ಲಿ ಚರ್ಚಿಸಲಾಗಿದೆ.

> ಗಾದೆ ಬರೆದಿದ್ದಾವೆ ನಿರಂತರ
>
> ಕಡಲ ಅಲೆಗಳು
>
> ಹವಳಮ್ಮನ ಒಡಲು
>
> ಹವಳದಿಬ್ಬಕೆ ಅಂಟಿ
>
> ವಜ್ರಗಾರೆಯ ಸೆಲಗಟ್ಟು
>
> ಮೊಗ್ಗುಗಳಿಗೆ
>
> ಇದು ಪುರಾತನ ಇದು ಚಿರಂತನ
>
> ಹವಳಕ್ಕೆ ಹೇಳಿದ ಸ್ಮೃತಿ[೧] (ಹವಳ ಹಾರಿದ ಹೊತ್ತು)

ಕಡಲಾಳದ ಹವಳವು ಹೆಣ್ಣಿನ ಸಂಕೇತ. ಇಲ್ಲಿ ಹವಳದ ಚಲನೆ ನಿಯಂತ್ರಿತವಾದುದು. ಅದು ಸದಾ ಚಲನಶೀಲವಾಗಿರುವುದಿಲ್ಲ. ಹೆಣ್ಣಿನ ಬದುಕು ಇದರಂತೆ ಈ ಸಮಾಜದಲ್ಲಿ ಚಲನಶೀಲತೆಯನ್ನು ಕಳೆದುಕೊಂಡು ತಟಸ್ಥವಾಗಿ ಉಳಿದುಬಿಟ್ಟಿದೆ.

---

೧) ಸ ಉಷಾ : ಹವಳ ಹಾರಿದ ಹೊತ್ತು - ೧೭

ಸಾಲ್ಮನ್‌ಗೆ ಖಂಡಾಂತರ

ಪ್ರಯಾಣವೇ ನೀತಿ

ಈಜುರೆಕ್ಕೆಗಳೆಲ್ಲ ತರಚಿ

ಜೀವಜಲ ಸೋರಿ

ಬಸವಳಿದರೂ ಸಾಗುತ್ತಲೇ

ಇರಬೇಕು ನಿರಂತರ[1] (ಹವಳ ಹಾರಿದ ಹೊತ್ತು)

ಇಲ್ಲಿ ಸಾಲ್ಮನ್ ಪುರುಷರ ಸಂಕೇತ. ಪುರುಷನು ಸದಾ ಚಲನಶೀಲನಾಗಿರಲೇ ಬೇಕಾದುದನ್ನು ಸಾಲ್ಮನ್ ಹೇಳುತ್ತದೆ. ಇದು ನಮ್ಮ ಸಮಜದಲ್ಲಿ ಸ್ತ್ರೀ-ಪುರುಷರ ಬದುಕಿನ ರೀತಿಯನ್ನು ಕುರಿತು ಹೇಳುತ್ತದೆ. ಇದೊಂದು ಬಗೆಯ ವಿಶಿಷ್ಟ ಹಾಗೂ ಉತ್ತಮ ಸಂಕೇತವಾಗಿದೆ. ಕಾರಣ ಇದು ನಮ್ಮ ಸಮಾಜದ ಕಟ್ಟು ಕಟ್ಟಳೆಗಳು ಹೆಣ್ಣು-ಗಂಡಿನ ಬದುಕನ್ನು ನಿಯಂತ್ರಿಸುವ ಕುರಿತು ಬಹು ಸೂಕ್ಷ್ಮವಾಗಿ ಕಟ್ಟಿಕೊಡುತ್ತದೆ. ಕವನದ ಕೊನೆಯಲ್ಲಿ ಸಾಲ್ಮನ್ ಜೊತೆಗೆ ಹವಳ ಹಾರುವ ಮೂಲಕ ಹೆಣ್ಣಿನ ಬದುಕಿನ ಚಲನಶೀಲತೆಗೆ ಪ್ರಾಮುಖ್ಯತೆ ನೀಡಿದ್ದಾರೆ ಹಾಗೂ ಹೆಣ್ಣು-ಗಂಡಿನ ಸಂಬಂಧದ ಸ್ವಾರಸ್ಯದ ಬಗೆಯನ್ನು ಈ ಕವಿತ ಕಟ್ಟಿಕೊಡುತ್ತದೆ.

ಹದ್ದು ಎರಗಿ

ಬೆಳ್ಳನೆ ಮೈಯೆಲ್ಲ

ರಕುತ ದೋಕುಳಿ

ಹದ್ದು ಬೀಗಿತು

ಕುತ್ತಿಗೆ ನಿಗುರಿಸಿ

---

೧) ಸ ಉಷಾ : ಹವಳ ಹಾರಿದ ಹೊತ್ತು - ೧೭

ಸದ್ದಿಲ್ಲದೆ

ಬೀಜ ಮೊಳೆಯುತ್ತಿತ್ತು

ಸತ್ತ ಕಣ್ಣೊಳಗೆ.[೧] (ಹದ್ದು-ಪಾರಿವಾಳ)

"ಕಾವ್ಯ ಪರಂಪರೆಯಿಂದ ಈ ಎರಡು ಪ್ರತೀಕಗಳು ಪಡೆದಿರುವ ಅರ್ಥವೂ ಇಲ್ಲಿ ಬಳಕೆಯಾಗುತ್ತದೆ. ಆದರೆ ಸರಸ್ವತಿ ಹದ್ದನ್ನು 'ಹೊರಗೆ' ಕೂತು 'ಕೋಪದ ಹಕ್ಕಿ'ಯಾಗಿ 'ತೀಕ್ಷ್ಣಕಣ್ಣಿನ' ಪಕ್ಷಿಯೆಂದು 'ಮುಗಿಲಿಗೇರುವ ರಕ್ಕೆ'ಯುಳ್ಳವನೆಂಬ ಗರ್ವದ್ದೆಂದೂ ಕಾಣಿಸುವುದು ಮತ್ತು ಪಾರಿವಾಳವನ್ನು 'ಒಳಗೆ' 'ಉಸಿರುಗಟ್ಟಿ' ಚಡಪಡಿಸುವ 'ಬೆಳ್ಳನೆ' ಹಕ್ಕಿಯೆಂದೂ 'ಗರ್ವ ಸರಿಯಲ್ಲ/ಪ್ರೀತಿ/ಬದುಕಿನ ಮರ್ಮ' ಎಂದು ಹೇಳಲು ಯತ್ನಿಸಿದ ತಪ್ಪಿಗಾಗಿ ಹದ್ದಿಗೆ ಬಲಿಯಾಗಬೇಕಾದದ್ದೆಂದೂ ಚಿತ್ರಿಸುತ್ತಾರೆ. 'ಒಳ' ಪ್ರಪಂಚ 'ಹೊರ' ಪ್ರಪಂಚಗಳಲ್ಲಿ ವಿಭಕ್ತವಾದ ಹೆಣ್ಣು-ಗಂಡಿನ ಬದುಕಿನ ಇಮ್ಮುಖ ಮೌಲ್ಯಗಳ ಪ್ರಶಸ್ತ ದಾಖಲೆ ಇದು. ಇಂಥ ಭಿನ್ನತೆ, ದುರ್ಬಲವಾದುದನ್ನು ಹೊಸಕಿ ಹಾಕಬಲ್ಲದು"[೨]

ನಿತ್ಯ, ಗೇರು-ಸೀಬೆ ಕೊಡುತ್ತಾಳಂತೆ

ನನ್ನ ಗೊಣಗಿಲ್ಲ.

ಪಟ್ಟಂತ, ಹುಣಿಸೇ ದೋರೆ ಕಿತ್ತು ಕೊಡಿ

ಅಂತ ಕೇಳದ್ದೇ ನನ್ನ ತಪ್ಪಲ್ಲವೇ?

ಮಾತು ಕೂಡಾ

ಬಂದು, ಸುಮ್ಮನಿರುವುದು ನನ್ನ

ತಪ್ಪಲ್ಲವೇ?

---

೧) ದು ಸರಸ್ವತಿ : ಹೆಣದರ ಜೇಡನಂತೆ -೩೧

೨) ಮೂರ್ವೋಕ್ತ - X

ಕೂತಕಡೆಯೇ ಕನಸು : ನೂರೆಂಟು ಬಣ್ಣ

ಕೊಕ್ಕಿನೊಳಗೇ ಗೊಣಗು, ಅಳಿದು ಸುಲಿಯುವುದು[1]  (ಕಮಲಾ ಹಮ್ಮಿಗೆ – ಗಿಣಿ)

ಈ ಕವನದಲ್ಲಿ ರೆಕ್ಕೆ ಇದ್ದು ಹಾರಲಾರದ ಸ್ಥಿತಿ, ನುಂಗಿದ್ದನ್ನು 'ಸುಮ್ಮನೆ' ತಿಂದು, ತನ್ನ ಕೊಕ್ಕಿನೊಳಗೆ ಗೊಣಗುವ ಗಿಣಿಯ ಪ್ರತೀಕದ ಮೂಲಕ ಹೆಣ್ಣಿನ ಜೀವನದಲ್ಲಿ ಸ್ವಾತಂತ್ರ್ಯದ ಅರ್ಥವನ್ನು ಹುಡುಕಲೆತ್ನಿಸಿದ್ದಾರೆ. ಈ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಮಾತು ಬಂದರೂ ಮೂಕಿ, ಸ್ವಾತಂತ್ರ್ಯವಿದ್ದರೂ ಬಂಧಿ। ಇದು ಹೇಳಿದ್ದನ್ನು ಕಂಠಪಾಠ ಮಾಡಿ ಚಾಚುತಪ್ಪದೆ ಒಪ್ಪಿಸುವ ಗಿಣಿಗಿಂತ ಬೇರೆಯ ಸ್ಥಿತಿಯಲ್ಲ. ಇಂತಹ ಸ್ಥಿತಿಯಲ್ಲಿ ಬದುಕುವ ಹೆಣ್ಣಿನ ಬಾಳು ಅತ್ಯಂತ ಕಷ್ಟಕರವಾದುದು. ಈ ಕಷ್ಟದಲ್ಲೇ ನೊಂದು ಬೆಂದು ಅವಳು ತಲುಪುವ ಸ್ಥಿತಿ ಪರಿಪಕ್ವತೆಯದ್ದು.

ಸಿದ್ಧಿಸಿದಂತಲ್ಲಾ, ಬೆಣ್ಣೆ ಉಕ್ಕುವುದಿಲ್ಲ,

ಮಾಗುವ ಸದ್ದಿಗೆ ಧ್ಯಾನಿಸಿ

ಸ್ಥಿರಗೊಳ್ಳುವ ಮನ ಕರಟುವುದಿಲ್ಲ,

ಹಸುಕಲಾಗುವುದಿಲ್ಲ. ಸದಾ ಹದ ತುಪ್ಪ

ಅಮ್ಮನಾಗುವುದೆಂದರೆ.... ಹೀಗೆ[2]  (ಅಮ್ಮನಾಗುವುದಂದರ)

ಇಲ್ಲಿ ಬೆಣ್ಣೆ ಕಾಯಿಸುವುದನ್ನೇ ಕವಯಿತ್ರಿ ಸೃಷ್ಟಿಯ ರೂಪಕವಾಗಿಸಿದ್ದಾರೆ. ಬೆಣ್ಣೆ ಕಾಯಿಸುವಾಗ ಅದರ ಹದ ತಿಳಿಯದ ಗೊಂದಲಗಳಿಗೀಡಾಗುವ ಪ್ರಸಂಗಗಳು ಕ್ರಿಯೆಯ ನಿರಂತರತೆಯಲ್ಲಿ ಪಕ್ವಗೊಳ್ಳುತ್ತಾ ಸಾಗುತ್ತದೆ. ಅಂತ್ಯದಲ್ಲಿ ಒಂದು ಹೊಸದರ ಉದಯಕ್ಕೆ ನಾಂದಿ ಹಾಗೂ ಸಂಪೂರ್ಣ ಪರಿಪಕ್ವತೆಯ ಸಿದ್ಧಿ, ಅಮ್ಮನಾಗುವುದೆಂದರೆ ಹೀಗೆ ಎನ್ನುವ

---

೧) ಸಂ ಹಂಪ ನಾಗರಾಜಯ್ಯ : ಹೊಸಗನ್ನಡ ಕವಿತೆ -೪೨೫೧

೨) ರೂಪ ಹಾಸನ : ಕಡಲಿಗಷ್ಟೊಂದು ಬಾಗಿಲು -೨೯

ಮೂಲಕ ಆ ಕ್ರಿಯೆಯ ಪರಿಪೂರ್ಣತೆ, ಮಾಗುವಿಕೆ, ಆ ಸಿದ್ಧಿ ಎಲ್ಲವೂ ಅಮ್ಮನ ಮೂರ್ತ ರೂಪದಲ್ಲಡಗಿರುವ ಸತ್ಯವನ್ನು ಹೊರಹಾಕಿದ್ದಾರೆ. ಇಷ್ಟೆಲ್ಲಾ ಆದರೂ ಅವಳ ಸ್ಥಿತಿ ಅಷ್ಟೇನು ಸೌಖ್ಯವಲ್ಲ. ಅವಳನ್ನು ಈ ಸಮಾಜ ನಡೆಸಿಕೊಳ್ಳುವ ಪರಿ ವಿಷಾದನೀಯ.

ಅವಳೊಂದು ಉತ್ಕಟ ಪ್ರೀತಿಯು

ಸಿಹಿನೀರ ನದಿಯಂತವಳು

ಎಲ್ಲ ಕರ್ಮ ತೊಳೆದೂ

ನಿತ್ಯ ನೂತನೆಯಾಗಿ ಮರುಹುಟ್ಟು ಪಡೆಯುತ್ತಲೇ

ತನ್ನನೇ ಮತ್ತೆ ಮತ್ತೆ

ಒಡ್ಡಿಕೊಳ್ಳಲೆಂದೇ ಹುಟ್ಟಿದಂತವಳು

ಇವಳೇ ಪವಿತ್ರ

ಮಸಿಬಟ್ಟೆ ಎಂಬುವವಳು

ಆಟಕ್ಕಿದ್ದರೂ ಲೆಕ್ಕಕ್ಕಿಲ್ಲದವಳು।[೧] (ಮಸಿಬಟ್ಟೆ ಎಂಬೋಳು)

ಇಲ್ಲಿ'ಮಸಿಬಟ್ಟೆ' ಪ್ರತಿಮೆಯನ್ನಿಟ್ಟುಕೊಂಡು ಹೆಣ್ಣನ್ನು ಚಿತ್ರಿಸಲಾಗಿದೆ. ಈ ಮಸಿಬಟ್ಟೆ ಉತ್ಕಟ ಪ್ರೀತಿ, ಸಿಹಿನೀರ ನದಿ, ನಿತ್ಯ ನೂತನೆ, ಪವಿತ್ರ ಎಲ್ಲವೂ ಆಗಿದ್ದರೂ ಅವಳ ಅಸ್ತಿತ್ವ ನಗಣ್ಯ. ಅವಳು 'ಆಟಕ್ಕಿದ್ದರೂ ಲೆಕ್ಕಕ್ಕಿಲ್ಲದವಳು'. ಇಲ್ಲಿ ಅವಳು ಎಲ್ಲವೂ ಆಗಿದ್ದರೂ ಏನೂ ಅಲ್ಲದವಳು. ಇದು ಇತಿಹಾಸದ ಬಗೆಗಿನ ವ್ಯಂಗ್ಯ. ಹೆಣ್ಣನ್ನು ಅಗತ್ಯವಿದ್ದಷ್ಟು ಬಳಸಿಕೊಂಡು ಕಡೆಗಣಿಸುವ ಸಮಾಜದ ಬಗೆಗೆ ಇಲ್ಲಿ ವಿಷಾದವಿದೆ.

---

೧) ರೂಪ ಹಾಸನ : ಕಡಲಿಗೆಷ್ಟೊಂದು ಬಾಗಿಲು -೭೪

ಹೆಣ್ಣಿಗೆ ತನಗನಿಸಿದ್ದನ್ನು ಸಂಕೋಚ, ಭಯ ತೊರೆದು ನಿಸ್ಸಂಕೋಚವಾಗಿ ಎಲ್ಲವನ್ನೂ ನೇರವಾಗಿ ಹೇಳುವ ಸ್ಥಿತಿ ಇಂದಿಗೂ ಲಭಿಸಿಲ್ಲ.

ಏನೇನೋ ಪಟಗುಟ್ಟಿದರೂ

ಹೇಳಬೇಕಾದ್ದನ್ನು ಹೇಳದೆ

ಏನೇನೆಲ್ಲಾ ಅನುಭವಿಸಿ, ಸಾಯುತ್ತೇವೆ.

ಜುಮ್ಮೆನ್ನಿಸುವ ಆಲೋಚನೆಗಳನ್ನೆಲ್ಲಾ

ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ

ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ.

ಹೇಳಲೇಬೇಕು ಎನಿಸಿದ್ದನ್ನು

ಹೇಳಹೋಗಿ ಬದಲು ಏನೇನೋ ತೊದಲುತ್ತೇವೆ.[೧] (ನಾವು ಹುಡುಗಿಯರೇ ಹೀಗೆ. . .)

ಇಲ್ಲಿ ಹಿಟ್ಟನ್ನು ಡಬ್ಬಿಯೊಳಗೆ ಒತ್ತಿ ಗಟ್ಟಿ ಮಾಡಿಡುವ ಸರಳ ಪ್ರತಿಮೆಯ ಮೂಲಕ ಹೆಣ್ಣಿನ ಭಾವನೆಗಳು ಹೊರಬರದೆ ಒಳಗೆ ಒತ್ತಿ ಗಟ್ಟಿ ಮಾಡಿಡುವ ರೀತಿಯನ್ನು ಅತ್ಯಂತ ವಿಭಿನ್ನವಾಗಿ ಹೇಳಲಾಗಿದೆ. ದಿನ ಬಳಕೆಯ ವಸ್ತು, ಪದಗಳ ಮೂಲಕವೇ ಪ್ರತಿಮೆಯನ್ನು ಸೃಷ್ಟಿಸಿ ಹೆಣ್ಣಿನ ಮನಸ್ಸಿನ ತಾಕಲಾಟಗಳನ್ನು ಮನಸ್ಥಿತಿಯನ್ನು ಇಲ್ಲಿ ಚಿತ್ರಿಸಲಾಗಿದೆ. ಮತ್ತೊಂದು ಕವಿತ ಇದೇ ರೀತಿ ಭಾಷೆಯ ಬಗ್ಗೆ ಹೇಳುತ್ತಾ,

---

೧) ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ೨೪

ಭಾಷೆ ಚಪಾತಿ ಹಿಟ್ಟಿನ ಹಾಗೆ

ಲಟ್ಟಿಸಿದರೆ ಗುಂಡಗಿರಬೇಕು

ಅಥವ ಮೂರು ಮೂಲೆ,

ಬೇರೆ ಆಕಾರವೇ ಬಾರದು ಅದಕೆ.[೧]        (ಪಾಠ-ಒಂದು.. ಎರಡು... ಮೂರು...)

ಚಪಾತಿ ಹಿಟ್ಟಿನ ಪ್ರತಿಮೆಯ ಮೂಲಕ ಭಾಷೆಯ ಬಗೆಯನ್ನು, ಅದರ ಆಕೃತಿಯ ಬಗೆಯನ್ನಿಲ್ಲಿ ಕಟ್ಟಿಕೊಡಲಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಭಾಷೆಯು ಪುರುಷ ರೂಪಿತವೇ ಆಗಿದೆ. ಇಲ್ಲಿ ಹೆಣ್ಣು 'ಭೂಮಿ' ಗಂಡು 'ಆಕಾಶ', 'ಅವನು' ದೇವರು 'ಅವಳು' ದಾಸಿ. ಈ ಬಗೆಯ ಕಲ್ಪನೆಗಳಲ್ಲೇ ಪುರುಷ ಹೆಣ್ಣನ್ನು ಅಧೀನ ದರ್ಜೆಯವಳಾಗಿ ಮಾಡಿಬಿಟ್ಟಿದ್ದಾನೆ. ಇಲ್ಲಿ ಈ ಭಾಷೆಗೆ ಬೇರೆ ಆಕೃತಿಯೇ ಇಲ್ಲ. 'ನಾನು' ಎಂದರೆ 'ಗಂಡು' ಎಂತಲೇ. ಅದಕ್ಕೆ ಬೇರೆ ಅರ್ಥ, ಆಕೃತಿಯೇ ಇಲ್ಲ ಇಲ್ಲಿ, ಚಪಾತಿ ಹಿಟ್ಟಿನಂತೆ!

ಈ ಪ್ರತಿಮೆ, ಪ್ರತೀಕಗಳಂತೆ ಮಹಿಳಾ ಕಾವ್ಯಗಳಲ್ಲಿ ಹೆಚ್ಚಾಗಿ ಕಂಡು ಬರುವ ಪ್ರತೀಕ ಎಂದರೆ 'ದೀಪ'. ದೀಪವನ್ನು ವಿವಿಧ ಬಗೆಗಳಲ್ಲಿ ಈ ಕಾವ್ಯಗಳಲ್ಲಿ ಬಳಸಿಕೊಳ್ಳಲಾಗಿದೆ.

ದೀಪಸಾಲ ಬೆಳಗಿನಲ್ಲಿ

ಯಾವುದದು ಜೋಡಿ ದೀಪ?!

ಇದು ನಾನು ಮತ್ತು ನೀನು ಗೆಳೆಯ. . .

ಒಲುಮೆ ಇದರ ಹೆಸರು.[೨]        (ದೀಪಸಾಲು)

---

೧) ಮಮತಾ ಜಿ ಸಾಗರ : ನದಿಯ ನೀರಿನ ತೇವ -೩೧

೨) ಜ್ಯೋತಿ ಗುರುಪ್ರಸಾದ್ : ಮಾಯಾಪೆಟ್ಟಿಗೆ - ೭೪

ಗಂಡು-ಹೆಣ್ಣಿನ ನಡುವಿನ 'ಒಲುಮೆ' ಅವರ ಬಾಳ ಬೆಳಗುವ 'ದೀಪ'. ಅವರ ಮನದ ಜ್ಯೋತಿಯಾಗಿದೆ. ಅವರು 'ಬದುಕು ಬಾಳು ಆಗಲು' ಈ ಬೆಳಕಿನ ಅವಶ್ಯಕತೆ ಬಹಳವಾಗಿರುತ್ತದೆ. ಇಲ್ಲಿ ದೀಪ ಅವರ ಒಲುಮೆಯ ಪ್ರತೀಕವಾಗಿದೆ. ಅದು ಅವರ ಬದುಕಿನ ಕತ್ತಲನ್ನು ಸರಿಸುವ ದಿವ್ಯಜ್ಯೋತಿ.

ಬೆಳಕ ಚರಿತ್ರೆಗೆಷ್ಟು ಹೆಸರು!

ಬುದ್ಧ, ಬಸವ, ಗಾಂಧಿ ಹೀಗೆ. . .

ಒಂದೇ ಉಸಿರಿನಲ್ಲಿ ಹೇಳಲೇನು?

ನನ್ನ ನಿನ್ನ ಕಣ್ಣೇ ಅಲ್ಲವೇನು?[1] (ದಾರಿದೀಪ)

ಇಲ್ಲಿ ಬುದ್ಧ, ಬಸವ, ಗಾಂಧಿ ಎಲ್ಲರ ಬದುಕಿನ 'ದಾರಿದೀಪ'. ಹಾಗೆಯೇ ಗಂಡು-ಹೆಣ್ಣಿನ ಕಣ್ಣಿನೊಳಗಿನ ಪ್ರೀತಿಯೇ ಇವರ ಬದುಕಿನ ದೀಪ. ಇಲ್ಲಿ ದೀಪದ ಪ್ರತೀಕ ವ್ಯಾಪಕಾರ್ಥವನ್ನು ಪಡೆದಿದೆ. ನಾಡಿನ ಒಳಿತಿಗೆ, ನಾಡಿನ ಕತ್ತಲನ್ನು ಸರಿಸಿ ಬೆಳಕ ತೋರಿಸಲು ಮುಂದಾದ ಮಹಾನ್ ಚೇತನಗಳು ಬದುಕಿನ ದಾರಿಗೆ ದೀಪವಾದಂತೆ, ಪ್ರೀತಿ ಎಂಬ ದೀಪವು ಗಂಡು-ಹೆಣ್ಣಿನ ಕಣ್ಣಿನ, ಬಾಳಿನ ಬೆಳಕಾಗಿದೆ.

ತಾಯಿ-ಮಗುವಿನ ಸಂಬಂಧವು ಅನನ್ಯವಾದುದು. ಮಗುವಿನ ಅಳು, ನಗು ಎಲ್ಲವೂ ಅವಳ ಬಾಳಿಗೆ ಸಂತಸ ತರುವ ಸಂಗತಿಗಳು. ಮಗು ತಾಯಿಯ ಪಾಲಿಗೆ ಅವಳ ಬದುಕನ್ನು ಬೆಳಗುವ ದೀಪ. ಅವಳು ಹಾಡುವ ಲಾಲಿ ಹಾಡು ಮಗುವಿಗೆ 'ಲಾಲಿದೀಪ'.

---

೧) ಪೂರ್ವೋಕ್ತ -೭೯

ಮುಚ್ಚಿದವೆಯೊಳಗೇ ಮಗು ನಕ್ಕಿತು

ಮುಚ್ಚಿದವೆಯೊಳಗೇ ಮಗು ಅತ್ತಿತು

ಗಾಳಿ ನೀರವ

ಲಾಲಿ ದೀಪವ

ತೂಗುತ್ತಿತ್ತು [1] (ಲಾಲಿದೀಪ)

ಇಲ್ಲಿ ತಾಯಿಯ ಲಾಲಿಹಾಡು ಮಗುವಿಗೆ 'ಲಾಲಿದೀಪ'ವಾಗಿದೆ. ದೀಪವನ್ನು ಲಾಲಿದೀಪವಾಗಿ ಬಹಳ ಸುಂದರ ಪ್ರತೀಕವನ್ನಾಗಿ ಇಲ್ಲಿ ನೋಡಲಾಗಿದೆ. ಈ ಲಾಲಿ ಹಾಡನ್ನು ಕೇಳುವ ಮಗು ಸುಖವಾಗಿ ನಿದ್ದೆ ಮಾಡುತ್ತದೆ. ಇದು ತಾಯಿಯ ವಾತ್ಸಲ್ಯದ ಪ್ರತೀಕ. ಹೀಗೆ ದೀಪದ ಪ್ರತೀಕಗಳು ಮಹಿಳಾ ಕಾವ್ಯಗಳಲ್ಲಿ ಭಿನ್ನವಾಗಿ ಚಿತ್ರಿತಗೊಂಡಿದೆ.

ಒಟ್ಟಾರೆ ಮಹಿಳಾ ಕಾವ್ಯಗಳಲ್ಲಿ ಪ್ರತಿಮೆ, ಪ್ರತೀಕ, ಸಂಕೇತ, ರೂಪಕಗಳ ಬಳಕೆಯನ್ನು ಗಮನಿಸಿದಾಗ ಇಲ್ಲಿ ಹೆಣ್ಣಿನ ಸೂಕ್ಷ್ಮ ಅನುಭವಗಳು ಕಾವ್ಯಗಳಲ್ಲಿ ಈ ರೀತಿ ಹೊಸ ಪರಿಯಲ್ಲಿ ಅನಾವರಣಗೊಂಡಿವೆ. ಇಲ್ಲಿ ಬಳಕೆಯಾಗಿರುವ ಪ್ರತಿಮೆ, ಪ್ರತೀಕಗಳನ್ನು ಗಮನಿಸುತ್ತಾ ಹೋದಂತೆ ಪ್ರಮುಖವಾಗಿ ಕಾಣುವ ಅಂಶಗಳೆಂದರೆ ಅಡುಗೆ ಮನೆಯ ಪ್ರತಿಮೆಗಳು. ತನ್ನ ದಿನನಿತ್ಯದ ಜೀವನದಲ್ಲಿ ಹೆಣ್ಣು ಹೆಚ್ಚಾಗಿ ತನ್ನನ್ನು ತೊಡಗಿಸಿಕೊಳ್ಳುವ ಕಾರ್ಯಸ್ಥಳ ಎಂದರೆ ಅಡುಗೆ ಮನೆ. ಇಲ್ಲಿ ಅವಳ ಅನುಭವ ತೀರಾ ಭಿನ್ನವಾದುದು. ಅಲ್ಲಿ ಆಕೆ ಸೃಷ್ಟಿಕ್ರಿಯೆಯಲ್ಲಿ ಸದಾ ನಿರತಳು. ಪ್ರತಿಯೊಂದು ಸಾಮಾಗ್ರಿಯೊಂದಿಗೂ ಒಂದು ರೀತಿಯ ಭಾವನಾತ್ಮಕ ಸಂಬಂಧ ಅವಳಿಗಿರುತ್ತದೆ. ಕಾವ್ಯದಲ್ಲಿ ಬಳಕೆಯಾಗುವ ಗಂಭೀರ ಪ್ರತಿಮೆಗಳನ್ನು ತೊರೆದು ಮಹಿಳೆಯರು ಸಾಮಾನ್ಯ ಅನುಭವವನ್ನೇ ಕಾವ್ಯಗಳಲ್ಲಿ ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ. ಇದು ಮಹಿಳಾ ಕಾವ್ಯಗಳ ವಿಶೇಷತೆ.

---

೧) ವೈದೇಹಿ ಅವರ ಆಯ್ದ ಕವಿತೆಗಳು -೬೪

ಇಲ್ಲಿ ಪುರುಷ ನಿರ್ಮಿತ ಪ್ರಾಚೀನ ಪ್ರತಿಮೆ, ಪ್ರತೀಕಗಳನ್ನು ಪ್ರಶ್ನಿಸಲಾಗಿದೆ. ಹೆಣ್ಣೆಂದರೆ ಭೂಮಿ, ದಾಸಿ, ಗಿಣಿ, ಪಾರಿವಾಳ ಇತ್ಯಾದಿ ಪ್ರತೀಕಗಳಿಂದ ಮಹಿಳಾ ಕಾವ್ಯಗಳು ಹೊರಬರಲೆತ್ನಿಸುತ್ತಿರುವುದು ಹಾಗೂ ತನ್ನದೇ ಆದ ವಿಶಿಷ್ಟ ಸೀರೆ, ರೌದಿ ಇತ್ಯಾದಿ ಪ್ರತಿಮೆಗಳನ್ನು ಬಳಸುತ್ತಿರುವುದು ಪ್ರಶಂಸನಾರ್ಹ ಸಂಗತಿಯಾಗಿದೆ. ಮಹಿಳೆಯರು ಪುರುಷ ರಚಿತ ಭಾಷೆಯನ್ನು ತೊರೆದು ತನ್ನ ಅನುಭವಗಳ ನೆಲೆಯಲ್ಲಿ ತನ್ನದೇ ಭಾಷೆಯನ್ನು ಕಟ್ಟಿಕೊಂಡು, ತನ್ನ ಅನುಭವಗಳನ್ನು ವಿಶಿಷ್ಟವಾಗಿ, ಪುರುಷರಿಗಿಂತ ಭಿನ್ನವಾಗಿ ಅಭಿವ್ಯಕ್ತಿಸುತ್ತಿರುವುದಕ್ಕೆ ಮಹಿಳಾ ಕಾವ್ಯಗಳು ಸ್ಪಷ್ಟ ನಿದರ್ಶನವಾಗಿವೆ. ಭಾಷೆ ಯಾರ ಸ್ವತ್ತೂ ಅಲ್ಲ. ಅದು ಸಮಾಜದ ಆಸ್ತಿ. ಆದರೆ ಇಲ್ಲಿ ಅದು ತನ್ನ ಅರ್ಥವನ್ನೇ ಕಳೆದುಕೊಂಡು ಸಮಾಜ ಎಂದರೆ ಪುರುಷ ಎಂದೇ ವ್ಯಾಖ್ಯಾನಗೊಂಡಿರುವ ಸಂದರ್ಭದಲ್ಲಿ ಸ್ತ್ರೀ ಕೆಳದರ್ಜೆಯವಳಾಗಿ ಬಿಡುತ್ತಾಳೆ. ಅಲ್ಲಿ ಪುರುಷನದೇ ಅಧಿಕಾರ, ದರ್ಪ ಎಲ್ಲ. ಇಂತಹ ಸಂದರ್ಭದಲ್ಲಿ ಭಾಷೆಯು ಅವನಿಂದಲೇ ರೂಪಿತವಾದ ಕಾರಣ ಭಾಷೆಯೂ ಹೆಣ್ಣನ್ನು ಸಂಬೋಧಿಸುವಾಗ ಕೆಳದರ್ಜೆಯವಳಾಗೇ ಗುರುತಿಸುತ್ತದೆ.

ಇಂದು ಸ್ತ್ರೀವಾದಿಗಳು ಭಾಷೆಯನ್ನು ಹೆಣ್ಣಿನ ನೆಲೆಯಿಂದ ಪುನರ್ ರಚಿಸುವ ಯತ್ನ ನಡೆಸುತ್ತಿರುವುದರ ಪರಿಣಾಮವಾಗಿ ಮಹಿಳಾ ಕಾವ್ಯಗಳಲ್ಲಿ ಭಾಷೆಯು ಭಿನ್ನವಾಗಿ ಬಳಕೆಗೊಂಡಿದೆ. ಭಾಷಾ ಬಳಕೆಯಲ್ಲಿ ಮಹಿಳೆಯರಿಗೆ ಹೇರಿದ್ದ ನಿಷೇಧವನ್ನು ಧಿಕ್ಕರಿಸಿ, ಭಾಷಿಕ ಮಡಿವಂತಿಕೆಯನ್ನು ತೊರೆದು, ಇಂದು ಮಹಿಳೆಯರು ನಿರ್ಭಿಡೆಯಿಂದ ಸ್ವತಂತ್ರವಾಗಿ ತಮ್ಮ ವಿಭಿನ್ನ ಆಲೋಚನೆ, ಅನುಭವಗಳನ್ನು ಭಾಷೆಯಲ್ಲಿ ಹರಿಯ ಬಿಟ್ಟಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ. ಒಟ್ಟಾರೆ ಮಹಿಳಾ ಕಾವ್ಯಗಳು ಈ ದಿಸೆಯಲ್ಲಿ ಇನ್ನೂ ಮುಂದಕ್ಕೆ ಸಾಗಬೇಕಾದ ಅಗತ್ಯವಿದೆ.

ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ ಒಂದು ಬಗೆಯ ವಿಶಿಷ್ಟ ಸಂವೇದನೆಯುಳ್ಳ ಸಾಹಿತ್ಯವಾಗಿದೆ. ಎಪ್ಪತ್ತರ ದಶಕದ ನಂತರ ಮಹಿಳೆಯರು ಸಾಹಿತ್ಯ ಕ್ಷೇತ್ರದಲ್ಲಿ ಅಪಾರವಾಗಿ ದುಡಿದಿದ್ದಾರೆ. ಈ ಅವಧಿಯಲ್ಲಿ ಹೆಚ್ಚು ಮಹಿಳೆಯರು ಬಳಸಿಕೊಂಡ ಪ್ರಕಾರವೆಂದರೆ ಕಾವ್ಯ. ತಮ್ಮ ಎಲ್ಲ ನೋವು-ನಲಿವುಗಳನ್ನು, ಅನುಭವ, ಆಲೋಚನೆಗಳನ್ನು ಕಾವ್ಯಗಳಲ್ಲಿ ಹರಿಯ ಬಿಟ್ಟಿದ್ದಾರೆ. ಮುಖ್ಯವಾಗಿ ಮಹಿಳಾ ಕಾವ್ಯಗಳಲ್ಲಿ ತನ್ನೆಲ್ಲಾ ಅನುಭವಗಳಿಗೆ ಕಾರಣನಾದ ಪುರುಷನ ಬಗೆಗೆ, ಪುರುಷ ಸಮಾಜದ ಬಗೆಗೆ ದನಿ ಎತ್ತಲಾಗಿದೆ. ಮಹಿಳಾ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಇದು ಅಕ್ಕ ಮಹಾದೇವಿಯಿಂದಲೇ ಆರಂಭವಾಗುತ್ತದೆ. ಪುರುಷರ ಬಗೆಗೆ ನೇರವಾಗಿ, ದಿಟ್ಟವಾಗಿ ಖಂಡಿಸಿದ ಮಹಿಳೆ ಈಕೆ. ವಚನಕಾರ್ತಿಯರೆಲ್ಲರೂ ಈ ಬಗೆಯ ದಿಟ್ಟನುಡಿಗಳಿಂದ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ.

ಆರಂಭದಿಂದ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಪುರುಷರ ಬಗೆಗೆ ಕಂಡುಬರುತ್ತಿದ್ದ ಧೋರಣೆಗಳು ಭಿನ್ನವಾಗಿದೆ. ೧೨ ನೇ ಶತಮಾನದ ವಚನಕಾರರ ಯುಗದಲ್ಲಿ ಸ್ತ್ರೀಯರಿಗೆ ಸಂಪೂರ್ಣ ಸ್ವಾತಂತ್ರ್ಯವಿದ್ದು ಪುರುಷರನ್ನು ಕುರಿತು, ಅವರ ಅನ್ಯಾಯಗಳನ್ನು ನೇರವಾಗಿ ಖಂಡಿಸುವ ಎದೆಗಾರಿಕೆ ತೋರಿದ್ದಾರೆ. ೧೫ ರಿಂದ ೧೮ ನೇ ಶತಮಾನದವರೆಗಿನ ಸ್ತ್ರೀ ಸಾಹಿತ್ಯದಲ್ಲಿ ಮಹಿಳೆಯರು ಹೆಚ್ಚಾಗಿ ಪುರುಷ ನಿರ್ಮಿತ ಸಾಂಪ್ರದಾಯಿಕ ಮೌಲ್ಯಗಳಿಗೆ ಬದ್ಧರಾಗಿದ್ದಂತೆ ಕಂಡುಬರುತ್ತಾರೆ. ೧೨ ನೇ ಶತಮಾನದಲ್ಲಿ ಸ್ತ್ರೀಯರಿಗಿದ್ದ ಕೆಚ್ಚು, ಪ್ರತಿಭಟನಾ ಪ್ರವೃತ್ತಿ ಇಲ್ಲಿ ಕುಂದಿದೆ. ಗಂಡನಿಗೆ ದಾಸಿಯಂತೆ ಸೇವೆ ಮಾಡಿ ಬದುಕುವುದೇ ಹೆಣ್ಣಿಗೆ ಮುಕ್ತಿಮಾರ್ಗ ಎಂದು ತಿಳಿದಂತೆ ಕಂಡು ಬರುತ್ತದೆ. ಇಲ್ಲಿ ಸ್ತ್ರೀಯರ ಸ್ಥಾನ ಮಾನಗಳಿಗೆ ಅಷ್ಟೇನು ಪ್ರಾಮುಖ್ಯತೆ ನೀಡಲಾಗಿಲ್ಲ. ಪತಿಯೇ ಪರದೈವ ನಂಬಿ ಅವನನ್ನು ಆರಾಧಿಸಲಾಗುತ್ತಿತ್ತು. ಪತಿಯ ಪಾದಸೇವೆಯೇ ಸತಿಧರ್ಮ ಎಂದು ಭಾವಿಸಲಾಗಿತ್ತು.

೧೯ನೇ ಶತಮಾನದ ನಂತರದಲ್ಲಿ ಅದರಲ್ಲೂ ೧೯೭೦ ರ ದಶಕದ ನಂತರ ಮಹಿಳಾ ಸಾಹಿತ್ಯ ಪ್ರಮುಖವಾಗಿ ಗುರುತುಸಿಕೊಂಡಿತು. ಮಹಿಳೆಯರು ಕಾವ್ಯ ಪ್ರಕಾರದಲ್ಲಿ ಹೆಚ್ಚು ತೊಡಗಿಸಿಕೊಂಡರು. ಇಲ್ಲಿ ಮಹಿಳೆಯರು ಪುರುಷನ ಬಗೆಗೆ ನೇರವಾಗಿ ದೊರೆತ ಶಿಕ್ಷಣ, ಅಭಿವ್ಯಕ್ತಿ ಸ್ವಾತಂತ್ರ್ಯದ ಪರಿಣಾಮವಾಗಿ ಸ್ತ್ರೀಯರು ಇದುವರೆಗೂ ಹತ್ತಿಕ್ಕಿದ್ದ ಭಾವನೆಗಳನ್ನು ಮುಕ್ತವಾಗಿ ಹರಿಯಬಿಟ್ಟರು. ಪುರುಷನ ಒಳಿತು-ಕೆಡುಕುಗಳನ್ನು ನಿರ್ಭಿಡೆಯಾಗಿ ಕಾವ್ಯಗಳಲ್ಲಿ ಹೇಳಿದರು.

ಆಧುನಿಕ ಕನ್ನಡ ಮಹಿಳಾ ಕಾವ್ಯಗಳಲ್ಲಿ ಮುಖ್ಯವಾಗಿ ಗಮನಿಸಿದಾಗ ಇಲ್ಲಿ ಅವರ ಸ್ವತಂತ್ರ ಆಲೋಚನೆಗಳು ಮುಖ್ಯವಾಗಿ ಗೋಚರಿಸುತ್ತದೆ. ಸ್ತ್ರೀಯರ ದೃಷ್ಟಿಕೋನಗಳಲ್ಲಿ ಬದಲಾವಣೆ ಕಂಡು ಬರುತ್ತದೆ. ಸ್ತ್ರೀಯರ ಒಳಲೋಕ ಇಲ್ಲಿ ಅನಾವರಣಗೊಂಡಿದೆ. ಪುರುಷರ ಅಸ್ತಿತ್ವದ ಬಗೆಗೆ, ಸ್ತ್ರೀ-ಪುರುಷ ಸಂಬಂಧಗಳ ಬಗೆಗೆ ತಮ್ಮ ನಿಲುವನ್ನು ವ್ಯಕ್ತ ಪಡಿಸಿದ್ದಾರೆ. ಸ್ತ್ರೀಯರ ಬದುಕಿನಲ್ಲಿ ಪುರುಷನ ಅಸ್ತಿತ್ವ ಬಹಳ ಅವಶ್ಯಕ. ಆದರೆ ತೀರಾ ಅನಿವಾರ್ಯವೇನೂ ಅಲ್ಲ. ಮಹಿಳಾ ಕಾವ್ಯಗಳಲ್ಲಿ ಪುರುಷ ಈ ಎರಡೂ ಬಗೆಯಲ್ಲೂ ಗೋಚರಿಸಿದ್ದಾನೆ. ಮಹಿಳಾ ಕಾವ್ಯಗಳಲ್ಲಿ ಪುರುಷ ಈ ಎರಡೂ ಬಗೆಯಲ್ಲೂ ಗೋಚರಿಸಿದ್ದಾನೆ. ಅಂದರೆ ಅವನ ಅವಶ್ಯಕತೆ ತೀರಾ ಅಗತ್ಯ ಎಂದು ಒಂದೆಡೆಯಾದರೆ ಆತನಿಲ್ಲದೆಯೂ ಬದುಕಬಲ್ಲೆವೆಂಬ ಅಭಿಪ್ರಾಯ ಇನ್ನೊಂದೆಡೆಯಾಗಿದೆ. ಇಲ್ಲಿ ಸ್ತ್ರೀಯರ ಸ್ವತಂತ್ರ ನಿಲುವು ತಾಳುವ ಸಾಮರ್ಥ್ಯ ಮುಖ್ಯವೆನಿಸುತ್ತದೆ. ಪುರುಷನ ಅಸ್ತಿತ್ವ ಇಲ್ಲಿ ಭಿನ್ನ ಭಿನ್ನವಾಗಿ ಗೋಚರಿಸಿದೆ.

ಸ್ತ್ರೀಯರು ಪುರುಷ ಪಾತ್ರಗಳನ್ನು ಚಿತ್ರಿಸುವಾಗ ಪ್ರತಿಯೊಂದು ಪಾತ್ರವನ್ನು ಗಮನಿಸುವಾಗಿನ ಅವರ ದೃಷ್ಟಿಕೋನ ಇಲ್ಲಿ ಭಿನ್ನವಾಗಿದೆ. ಪುರುಷನ ಎಲ್ಲಾ ಪಾತ್ರಗಳಿಗಿಂತ ಮಹಿಳೆಯರಿಗೆ ಆಪ್ತವೆನಿಸುವ ಪಾತ್ರ ಎಂದರೆ ಪ್ರೇಮಿಯದ್ದು. ಮಹಿಳಾ ಕಾವ್ಯಗಳಲ್ಲಿ ಮುಖ್ಯವಾಗಿ ಪ್ರಶ್ನೆಗೊಳಗಾಗಿರುವ ಪಾತ್ರಗಳೆಂದರೆ ಪುರಾಣ ಪುರುಷರ ಪಾತ್ರಗಳು. ಪುರಾಣ ಪುರುಷರನ್ನು ನೋಡುತ್ತಿದ್ದ ದೃಷ್ಟಿಕೋನ ಇಂದು ಬದಲಾಗಿದೆ. ಪುರುಷೋತ್ತಮರೆನಿಸಿದವರೆಲ್ಲ ಇಂದು ಪುರುಷಾಧಮರಾಗಿ ಕಂಡು ಬರುತ್ತಾರೆ. ರಾಮ ರಾವಣನಂತೆ, ರಾವಣ ರಾಮನಂತೆ ಕಂಡು ಬಂದಿದ್ದಾರೆ. ಅಂದರೆ ಪತಿವ್ರತಾ ಧರ್ಮದ ಹೆಸರಿನಲ್ಲಿ ಹೆಣ್ಣನ್ನು ಶೋಷಿಸಿದ ಇಂಥ ಪುರಾಣ ಪುರುಷರ ಬಗೆಗೆ ಇಲ್ಲಿ ತೀವ್ರ ವಿರೋಧ, ಆಕ್ರೋಶವಿದೆ. ಮಹಿಳೆಯರ ಜೀವನದಲ್ಲಿ ಇಂದಿಗೂ ಈ ಪಾತ್ರಗಳು ಬೀರಿದ ಪ್ರಭಾವ, ಉಂಟು ಮಾಡಿದ ಪರಿಣಾಮ ಅಪಾರ.

ಮಹಿಳೆಯರ ಬದುಕಿನಲ್ಲಿ ಬರುವ ಅತಿ ಮುಖ್ಯ ವ್ಯಕ್ತಿ ಅವಳ ಬಾಳ ಸಂಗಾತಿ. ಈ ಕಾವ್ಯಗಳಲ್ಲಿ ತಿಳಿದು ಬಂದಂತೆ ಇಲ್ಲಿ ಗಂಡನಾದವನು ಹೆಂಡತಿಯ ಮೇಲೆ ಪ್ರೀತಿಗಿಂತ ದರ್ಪ ತೋರಿಸುವಲ್ಲಿ ಆಸಕ್ತ. ಅವಳೆಲ್ಲ ಬೇಕು ಬೇಡಗಳು ಅವನಿಗೆ ಅನವಶ್ಯಕ. ಆಕೆ ತನ್ನ ದಾಸಿ, ತನ್ನ ಕೆಲಸ ಕಾರ್ಯ ಮಾಡಿಕೊಡುವ, ತನ್ನ ಮಕ್ಕಳನ್ನು ಹೆತ್ತುಕೊಡುವ ಯಂತ್ರವಷ್ಟೇ. ಗೆಳೆಯನಿದ್ದಾಗಿನ ಅವನ ವರ್ತನೆಗೂ, ಗಂಡನಾದಾಗಿನ ಅವನ ವರ್ತನೆಗೂ ಅಜಗಜಾಂತರ. ಗೆಳೆಯನಲ್ಲಿನ ಕಾಡುವ ಪ್ರೀತಿ, ಒಲವು ಗಂಡನಾದಾಗ ಅಧಿಕಾರ ಸ್ಥಾಪನೆಯ, ದರ್ಪದ ಹಂತದಲ್ಲಿ ಬಂದು ನಿಲ್ಲುತ್ತದೆ. ಹೀಗೆ ಮಹಿಳೆಯರು ಗಂಡನಿಗಿಂತ ಗೆಳೆಯನ ಹೆಚ್ಚು ಒಲವು ತೋರಿದ್ದಾರೆ. ಗಂಡನೊಳಗಿನ ಗೆಳೆಯನಿಗಾಗಿ ಹಂಬಲಿಸಿದ್ದಾರೆ. ಗಂಡನ ಸ್ವೇಚ್ಛಾಚಾರಕ್ಕೆ ಇಲ್ಲಿ

ಧಿಕ್ಕಾರವಿದೆ. ಒಟ್ಟಾರೆ ಮರುಷ ಸಮುದಾಯದ ಬಗೆಗೆ ಮಹಿಳೆಯರಿಗೆ ಬೇಸರವಿದೆ. ಅವರ ವಿರುದ್ಧ ಪ್ರತಿಭಟನೆಯ ಧ್ವನಿ ಇದೆ. ಒಟ್ಟು ಮರುಷ ಸಮುದಾಯದ ಬಗೆಗೆ ಮಹಿಳಾ ಕಾವ್ಯಗಳಲ್ಲಿ ಸದಭಿಪ್ರಾಯ ಇರುವುದು ಕಂಡುಬರುವುದಿಲ್ಲ.

ಮಹಿಳಾ ಕಾವ್ಯಗಳಲ್ಲಿ ಸ್ತ್ರೀ-ಮರುಷ ಸಂಬಂಧಗಳು ಪರಸ್ಪರ ಅಗತ್ಯದ್ದಾಗಿದೆ. ಗಂಡ-ಹೆಂಡತಿಯ ಸಂಬಂಧ ಜಟಿಲವಾಗಿ ಕಂಡು ಬರುತ್ತದೆ. ಇಲ್ಲಿ ಗಂಡನ ಸ್ಪಂದನೆಯ ಕೊರತೆಯಿಂದಾಗಿ ಆ ಸಂಬಂಧದಲ್ಲಿ ಕೊಂಚ ಏರುಪೇರಾಗಿರುವುದು ತಿಳಿದು ಬರುತ್ತದೆ. ಉಳಿದಂತೆ ಇತರ ಸಂಬಂಧಗಳು ಸಹಜ ಪ್ರೀತಿ, ವಿಶ್ವಾಸದಿಂದ ಕೂಡಿವೆ. ಇಲ್ಲಿ ಮರುಷ ವಿವಿಧ ಪಾತ್ರಗಳಲ್ಲಿ ವಿವಿಧ ರೀತಿಯಲ್ಲಿ ಚಿತ್ರಿತಗೊಂಡಿದ್ದಾನೆ. ತಂದೆಯಾಗಿ, ಸಹೋದರನಾಗಿ, ಗೆಳೆಯನಾಗಿ, ಮಗನಾಗಿ ನಾನಾ ಪಾತ್ರಗಳಲ್ಲಿ ವಿಭಿನ್ನವಾಗಿ, ಆಪ್ತವಾಗಿ ಕಂಡು ಬರುತ್ತಾನೆ.

ಮಹಿಳಾ ಕಾವ್ಯಗಳ ಭಾಷಾ ಬಳಕೆಯೂ ಇಲ್ಲಿ ವಿಶಿಷ್ಟವಾಗಿದ್ದು ಸ್ವಂತಿಕೆಯನ್ನು ರೂಪಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಈ ಮೂಲಕ ಮರುಷರ ಭಾಷೆಗಿಂತಲೂ ಭಿನ್ನವಾಗಿ, ವಿಶೇಷವಾಗಿದೆ. ಹೊಸ ಹೊಸ ಪ್ರತಿಮೆಗಳನ್ನು, ಪ್ರತೀಕಗಳನ್ನು ತಮ್ಮ ಅನುಭವ ಮೂಲದಿಂದ ಸೃಷ್ಟಿಸುವ ಮೂಲಕ ಸೃಜನಶೀಲತೆ ಮೆರೆದಿದ್ದಾರೆ. ಒಟ್ಟಾರೆಯಾಗಿ ಸ್ತ್ರೀಯರಿಗೆ ದೊರೆತ ಆಧುನಿಕ ಸವಲತ್ತುಗಳ ಮುಖಾಂತರವಾಗಿ, ಸ್ವಾತಂತ್ರ್ಯದ ಫಲವಾಗಿ ಅವರ ಚಿಂತನೆಗಳಲ್ಲಿ ಬದಲಾವಣೆ ಕಂಡು ಬಂದು ಮುಕ್ತವಾಗಿ ಅಭಿವ್ಯಕ್ತಿಸುವ ಸಾಮರ್ಥ್ಯ ಪಡೆದಿದ್ದಾರೆ. ಮರುಷರ ಬಗೆಗೆ ಯಾವುದೇ ಮುಚ್ಚು ಮರೆಯಿಲ್ಲದೆ. ಕಾವ್ಯಗಳಲ್ಲಿ ತಮಗನಿಸಿದ್ದನ್ನು ಹೇಳಲಾಗಿದೆ. ಹೀಗಾಗಿ ಮರುಷರ ಬಗೆಗೆ ಮಹಿಳೆಯರಿಗಿದ್ದ ಭಾವ ತೆರೆದಿಟ್ಟಂತಾಗಿದೆ. ಮಹಿಳಾ ಕಾವ್ಯಗಳಲ್ಲಿ ಮರುಷ ತನ್ನ ಪಾತ್ರ ನಿರ್ವಹಣೆಗಳಲ್ಲಿ ಭಿನ್ನ ಭಿನ್ನ ಸ್ಥಾನಗಳನ್ನು ಪಡೆದುಕೊಂಡು ಕೆಲವೊಮ್ಮೆ ಅವಶ್ಯಕವೆನಿಸಿದರೂ ಅನಿವಾರ್ಯವೇನೂ ಅಲ್ಲ ಎಂಬಂತೆ ಚಿತ್ರಿತಗೊಂಡಿದ್ದಾನೆ.

ಈ ನಿಟ್ಟಿನಲ್ಲಿ ಸಂಪೂರ್ಣ ಮಹಿಳಾ ಸಾಹಿತ್ಯದಲ್ಲಿ ಮರುಷನ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವ ಯತ್ನ ಆಗಬೇಕಿದೆ. ಮಹಿಳಾ ಕಾವ್ಯಗಳಲ್ಲೇ ಮರುಷನ ಬಗೆಗೆ ಇಷ್ಟೊಂದು ವಿಭಿನ್ನ ಅಭಿಪ್ರಾಯ, ಚಿಂತನೆಗಳು ಮೂಡಿ ಬಂದಿರುವಾಗ, ಇನ್ನು ಇಡೀ ಮಹಿಳಾ ಸಾಹಿತ್ಯದಲ್ಲಿ ಇನ್ನೂ ಹಲವಾರು ವೈವಿಧ್ಯತೆ ಕಾಣಲು ಸಾಧ್ಯವಿದೆ. ಹೀಗಾಗಿ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಚರ್ಚೆ, ಸಂಶೋಧನೆಯ ಅಗತ್ಯತೆ ಇಂದು ಹೆಚ್ಚಾಗಿದೆ.

## ಪ್ರಧಾನ ಆಕರಗಳು


೧) ಅಕ್ಷತಾ ಕೆ. : ರೆಕ್ಕೆ ಬಿಚ್ಚಿ ಆಕಾಶ ನೆಚ್ಚಿ

ಅಹರ್ನಿಶಿ ಪ್ರಕಾಶನ, ಶಿವಮೊಗ್ಗ

೨೦೦೭

೨) ಛಾಯಾ ಭಗವತಿ : ಪುಟಾಣಿ ಕೆಂಪು ಶೂ

ಲೋಹಿಯಾ ಪ್ರಕಾಶನ, ಬಳ್ಳಾರಿ

೨೦೦೯

೩) ಧರಣಿ ಮಾಲಗತ್ತಿ : ಟ್ರೆಡ್‌ಜಾಮ್

ಶೈಲ ಪ್ರಕಾಶನ, ಮುದ್ದೇಬಿಹಾಳ್

೧೯೯೫

೪) ಹೇಮಾ : ವಿರಹೋತ್ಸವ

ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು , ಬೆಂಗಳೂರು

೧೯೮೩

೫) ಜ್ಯೋತಿ ಗುರುಪ್ರಸಾದ್ : ಮಾಯಾ ಪೆಟ್ಟಿಗೆ

ಅಧ್ಯಯನ ಮಂಡಲ, ಬೆಂಗಳೂರು

೨೦೦೯

೬) ಲಲಿತಾ ನಾಯಕ್ ಬಿ ಟಿ : ಬಿದಿರು ಮೆಳೆ ಕಂಟಿಯಲಿ

ಅಂಕಿತ ಪ್ರಕಾಶನ, ಬೆಂಗಳೂರು

೧೯೯೭

೭) ಮಮತಾ ಜಿ ಸಾಗರ : ನದಿಯ ನೀರಿನ ತೇವ

ಇಳಾ ಪ್ರಿಂಟರ್ಸ್, ಬೆಂಗಳೂರು

೧೯೯೮

೮) ಮಮತಾ ಜಿ ಸಾಗರ : ಹೀಗೆ ಹಾಳೆಯ ಮೇಲೆ ಹಾಡು

ಅಭಿನವ, ಬೆಂಗಳೂರು

೨೦೦೭

೯) ಪ್ರತಿಭಾ ನಂದಕುಮಾರ್‌ರವರ ಆಯ್ದ ಕವಿತೆಗಳು : ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ)

೨೦೦೭

೧೦) ಪ್ರತಿಭಾ ನಂದಕುಮಾರ್ : ಕವಡೆಯಾಟ

ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು

೨೦೦೭

೧೧) ಪ್ರತಿಭಾ ನಂದಕುಮಾರ್ : ರಸ್ತೆಯಂಚಿನ ಗಾಡಿ

ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು

೧೯೯೧

೧೨) ಪ್ರತಿಭಾ ನಂದಕುಮಾರ್ : ಆಹಾ, ಪುರುಷಾಕಾರಂ!

ನೆಲಮನೆ ಪ್ರಕಾಶನ, ಮಂಡ್ಯ ಜಿಲ್ಲೆ

೨೦೦೦

೧೩) ಡಾ. ಪುಷ್ಪ ಎಚ್ ಎಲ್ : ಲೋಹದ ಕಣ್ಣು

ಲೋಹಿಯಾ ಪ್ರಕಾಶನ, ಬಳ್ಳಾರಿ

೨೦೦೮

೧೪) ರಜಿಯಾ ಡಿ ಬಿ : ರಜಿಯಾ ಅವರ ಕವಿತೆಗಳು

ಲೋಹಿಯಾ ಪ್ರಕಾಶನ. ಬಳ್ಳಾರಿ

೨೦೧೦

೧೫) ರೂಪ ಹಾಸನ : ಕಡಲಿಗಷ್ಟೊಂದು ಬಾಗಿಲು

ಲೋಹಿಯಾ ಪ್ರಕಾಶನ. ಬಳ್ಳಾರಿ

೨೦೧೦

೧೬) ಸರಸ್ವತಿ ದು : ಜೀವಸಂಪಿಗೆ

ಅಭಿನವ, ಬೆಂಗಳೂರು

೨೦೦೬

೧೭) ಸರಸ್ವತಿ ದು : ನೇಕಾರರ ಜೇಡನಂತೆ

ಇಳಾ ಪ್ರಕಾಶನ, ಬಳ್ಳಾರಿ

೧೯೯೭

೧೮) ಸವಿತಾ ನಾಗಭೂಷಣ : ಕಾಡುಲಿಲ್ಲಿ ಹೂವುಗಳು

ರೂಪ ಪ್ರಕಾಶನ, ಮೈಸೂರು

೨೦೦೬

| | | |
|---|---|---|
| ೧೯) ಸುಕನ್ಯಾ ಮಾರುತಿ | : | ನಾನೆಂಬ ಮಾಯೆ |
| | | ಸಪ್ನ ಬುಕ್ ಹೌಸ್, ಬೆಂಗಳೂರು |
| | | ೨೦೦೯ |
| ೨೦) ಉಷಾ ಸ | : | ಹವಳ ಹಾರಿದ ಹೊತ್ತು |
| | | ಅಭಿನವ ಪ್ರಕಾಶನ, ಬೆಂಗಳೂರು |
| | | ೨೦೦೫ |
| ೨೧) ವೀಣಾ ಬನ್ನಂಜೆ | : | ಅಗ್ನಿನ ಹಾದಿ |
| | | ರವೀಂದ್ರ ಪುಸ್ತಕಾಲಯ, ಶಿವಮೊಗ್ಗ |
| | | ೨೦೧೦ |
| ೨೨) ವೇದಾ ಎಂ ಎಸ್ | : | ಬಿಳಲುಗಳು |
| | | ದೇವಿ ಪ್ರಕಾಶನ, ಮೈಸೂರು |
| | | ೧೯೮೯ |
| ೨೩) ವೈದೇಹಿ ಅವರ ಆಯ್ದ ಕವಿತೆಗಳು | : | ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ) ಕರ್ನಾಟಕ |
| | | ೨೦೦೭ |
| ೨೪) ಸಂ. ಹಂಪ ನಾಗರಾಜಯ್ಯ<br>ಜಿ ಹೆಚ್ ನಾಯಕ | : | ಹೊಸಗನ್ನಡ ಕವಿತೆ<br>೧೯೮೫ |
| ೨೪) ಡಾ. ಎಂ ಎ ಜಯಚಂದ್ರ<br>ಡಾ. ಶಾಂತಲಕ್ಷ್ಮೀ<br>ಡಾ. ಶಶಿಕಲಾ ವೀರಯ್ಯಸ್ವಾಮಿ | : | ಆಧುನಿಕ ಕನ್ನಡ ಕವಿತೆಗಳು<br>ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು<br>೨೦೦೬ |

## ಪೂರಕ ಆಕರಗಳು

೧) ಅಕ್ಕ ಮಹಾದೇವಿ : ನಂಜನಗೂಡು ತಿರುಮಲಾಂಬ

ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು

೨೦೦೯

೨) ಮಂಗಳಾ ಟಿ ನ : ತಿರುಮಲಾಂಬ

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೦೦೯

೩) ಮಮತಾ ಜಿ ಸಾಗರ : ಮಹಿಳಾ ವಿಷಯ

ಇಳಾ ಪ್ರಕಾಶನ, ಬೆಂಗಳೂರು

೨೦೦೭

೪) ರವಿ ನಾಯಕ್ : ಬಿ ಟಿ ಲಲಿತಾ ನಾಯಕ್‌ರವರ ಕಾವ್ಯದ ವೈಶಿಷ್ಟ್ಯಗಳು

ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೨೦೦೯

೫) ರಂ ಶ್ರೀ ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ

ಗೀತಾ ಬುಕ್ ಹೌಸ್, ಮೈಸೂರು

೧೯೯೩

೬) ಡಾ. ಶಿವರುದ್ರಪ್ಪ ಜಿ ಎಸ್ : ಕಾವ್ಯಾರ್ಥ ಚಿಂತನ

ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

೨೦೦೫

೭) ಸುಮಿತ್ರಾ ಬಾಯಿ ಬಿ ಎನ್ : ಸ್ತ್ರೀವಾದ

ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೦೦೬

೮) ಡಾ. ಶ್ರೀಮತಿ ಎಚ್ ಎಸ್ : ಸ್ತ್ರೀವಾದ

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೨.

೯) ಪ್ರ. ಸಂ. ಆರ್ಯಾಂಬ ಪಟ್ಟಾಬಿ : ಮಹಿಳಾ ಸಾಹಿತ್ಯ ಸಮೀಕ್ಷೆ

ಸಂ. ಪ್ರೊ. ಸ ನ ಗಾಯಿತ್ರಿ

ಸಂವಹನ, ಮೈಸೂರು

ಡಾ. ಎಸ್ ಡಿ ಶಶಿಕಲಾ

೨೦೦೪

೧೦) ಸಂ. ಬರಗೂರು ರಾಮಚಂದ್ರಪ್ಪ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ

ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೦೦೬

೧೧) ಸಂ. ದಂಡಪ್ಪ ಎಚ್ : ಸುವರ್ಣ ಸಾಹಿತ್ಯ ವಿಮರ್ಶೆ

ಸುಮಿತ್ರಾ ಬಾಯಿ ಬಿ ಎನ್

ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು

೨೦೦೬

೧೨) ಸಂ. ಡಾ. ಹಿರೇಮಠ ಆರ್ ಸಿ : ಶಿವಶರಣೆಯರ ವಚನಗಳು ಸಂಪುಟ-೧
ಮಹಾದೇವಿಯಕ್ಕನ ವಚನಗಳು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೬೮

೧೪) ಸಂ. ಡಾ. ಸಬಿಹಾ ಭೂಮಿಗೌಡ : ಕನ್ನಡ ಸಾಹಿತ್ಯ ಮತ್ತು ಮಹಿಳೆ
ಡಾ. ಮಲ್ಲಿಕಾ ಘಂಟಿ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೨೦೦೬

೧೫) ವಿವಿಧ ಲೇಖಕರು : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ
(ವಿಚಾರ ಸಂಕಿರಣ ಮಾಲೆ)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೨೦೦೬

೧೬) ಸಂ ಡಾ. ಶ್ರೀಮತಿ ಎಚ್ ಎಸ್ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೬

೧೭) ಡಾ. ಶ್ರೀಮತಿ ಎಚ್ ಎಸ್ : ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೯

